# ಬಲವಾದ ವಿಶ್ವಾಸ ಅರಿಕೆಗಳು

# 1000



ಜೆ. ಸ್ಯಾಮ್ ಜಬದುರೈ

## இயேசு கிறிஸ்துவின் நாமத்தில் அன்பின் வாழ்த்துக்கள்

ஏறக்குறைய 7 ஆண்டுகளாக பல இடங்களிலிருந்து சேகரித்த சுமார் 200 ஆண்டுகளுக்கு முன்பு வரை அச்சடிக்கப்பட்ட, ஆரோக்கிய உபதேசங்கள் அடங்கிய, கிறிஸ்தவ ஆவிக்குரிய புத்தகங்களை, பல மணி நேரம் கொடுத்து, பல இலட்சங்கள் செலவு செய்து மின் நூல்களாக (E-Books) இலவசமாக (மத்தேயு 10:8) உங்கள் கரங்களில் கொடுப்பதற்கு, அற்பரும் நீசருமான எங்களை பயன்படுத்தின உன்னத தேவனுக்கே சகல கனமும் மகிமையும் துதியும் உரித்தாவதாக. இதைப் போன்ற இன்னும் ஆயிரக்கணக்கான புத்தகங்களை தரவிறக்கம் (Download) செய்ய எங்களுடைய இணையதளத்தை சொடுக்கவும்/பார்க்கவும்: www.WordOfGod.in

95 சதவீத புத்தகங்கள் அச்சில் இல்லாதவைகளும், காப்புரிமை முடிந்தவைகளுமே. மீதமுள்ள புத்தகங்கள், நல்ல உபதேசங்களை கொண்டிருப்பதால், முடிந்தவரை ஆசிரியரின் உரிமையோடு மின்-நூலாக, இலவசமாக வெளியிடுகிறோம். ஒருவேளை உங்களுடைய புத்தகம் இப்படி இலவசமாக மின்-நூல் (E-Book) வடிவில் வரக்கூடாது என்று நினைத்தீர்களானால், தயவு செய்து எங்களை மன்னித்துக்கொள்ளுங்கள். எங்களுடைய WhatsApp எண்ணிற்கோ, மின் அஞ்சலிலோ (Email) எங்களுக்கு தெரியப்படுத்துங்கள். உடனடியாக எங்களுடைய இணைய-தளத்திலிருந்து எடுத்துவிடுகிறோம்.

WhatsApp/SMS: +91 90 190 490 70 / +91 7676 50 5599
Email: wordofgod@wordofgod.in

## *Wishing you in the mighty name of Jesus Christ*

*We had collected several thousands of old Tamil Spiritual Books which are rich in Sound Doctrines across various places of India for 7 years. Some of them are more than 200 years old books. We have spent millions of hours and money in scanning them and coverting them to E-Books. The work is still in progress. These E-books are published completely free of cost (Matt 10:8) forever. We give all the praise and glory to God for giving this wonderful opportunity to server Him. You can download thousands of similar Tamil Christian E-books from our website www.WordOfGod.in completely free of cost at any time.*

*95% of these E-Books are not being printed now and their copyrights are already expired. The remaining books are sent as E-Books mostly with the permission from the Authors. If you feel that your books should not be published as E-Book freely, kindly execuse and forgive us. Please let us know the book details by WhatsApp or Email we will remove them from our website.*

WhatsApp/SMS: +91 90 190 490 70 / +91 7676 50 5599
Email: wordofgod@wordofgod.in

# ಬಲವಾದ
# ವಿಶ್ವಾಸ ಅರಿಕೆಗಳು ಸಾವಿರ
## (A THOUSAND POWERFUL TRUSTWORTHY COMMITMENTS)

ಜೆ. ಸ್ಯಾಮ್ ಜೆಬದುರೈ

ಪ್ರಕಾಶಕರು :
ಸೆಲ್ವಿನ್ ಕ್ರಿಸ್ಟೋಫರ್ ಜಾರ್ಜ್
24ನೇ 'F' ಅಡ್ಡರಸ್ತೆ, ಈಜಿಪುರ,
ವಿವೇಕನಗರ, ಬೆಂಗಳೂರು – 560 047

ಮೊದಲನೆ ಮುದ್ರಣ : ಮಾರ್ಚ್ 2003 Book No. : 111

ಕಾಣಿಕೆ - ರೂ. 10.00

*Translated by*
**MR. VIJENDRA KUMAR**
BANGALORE - 560 008

*Copies can be had from :*

**SELVIN CHRISTOPHER GEORGE**
24th 'F' Cross, Egipura, Viveknagar
Bangalore - 560 047
Phone : 080-25712448

# ವಿಷಯ ಸಂಗ್ರಹಣೆ

14. ನನ್ನ ವಿಜ್ಞಾಪನೆಯನ್ನು ಕೇಳುವಾತನೇ
15. ಭಯವೂ, ಸಂಕಟ, ಕಳವಳವೂ ನನ್ನನ್ನು ತಟ್ಟದು
16. ನನ್ನ ಒಂಟಿತನದಲ್ಲಿ ಭಯಪಡುವದಿಲ್ಲ
17. ನನ್ನ ಶತ್ರುಗಳ ಮುಂಭಾಗದಲ್ಲಿ
18. ನನ್ನನ್ನು ಹರ್ಷಿಸುವಂತೆ ಮಾಡುವಾತನೇ
19. ನನಗೆ ಆಶೀರ್ವಾದಗಳುಂಟು
20. ನನ್ನ ಬಲವಾದಾತನೇ
21. ನಾನೂ ನನ್ನ ದೇವರೂ
22. ದೈವಿಕ ಸುಖವೂ ನನ್ನ ಬಾಧ್ಯತೆಯೂ
23. ಸ್ತುತಿಸಿ ಆನಂದಿಸುವೆನು
24. ಎಫೆಸದವರಿಗೆ ಪತ್ರಿಕೆಯಿಂದ
25. ಅಧಿಕಾರವೂ, ಆಳ್ವಿಕೆಯೂ, ಬಲವೂ
26. ಜಯವನ್ನು ಕೊಡುವತನು
27. ಘನವೂ ಮಹಿಮೆಯೂ

# 1. ನಾನು ದೇವರ ಮಗು

1. ನಾನು ದೇವರ ಮಗುವೂ ರಾಜಾಧಿರಾಜನ ಮಗುವು ಉನ್ನತನಾದ ದೇವರ ಮಗುವು. ಯೋಹಾ.1:12

2. ನಾನು ಅನಾಥನಲ್ಲ, ದಿಕ್ಕೆಟ್ಟವನೂ ಅಲ್ಲ; ಆಕಾಶದ ಕೆಳಗೆ ಒಂಟಿಯೂ ಅಲ್ಲ; ಕರ್ತನೇ ನನಗೆ ತಂದೆಯ ತಾಯಿಯೂ ಆಗಿದ್ದಾನೆ. ಗಲಾ.4:6, ಯೆಶಾ.49:16

3. ಯೇಸು ಕ್ರಿಸ್ತನ ಹೆಸರಿನಲ್ಲಿ ನಂಬಿಕೆಯುಳ್ಳವನಾಗಿ ಆತನನ್ನು ಅಂಗೀಕಾರ ಮಾಡಿಕೊಂಡಿದ್ದರಿಂದ ನಾನು ಆತನ ಮಗುವಾಗುವಂತೆ ದೇವರು ನನಗೆ ಅಧಿಕಾರ ಕೊಟ್ಟಿದ್ದಾನೆ. ಯೋಹಾ.1:12

4. ಕತ್ತಲೆಯಿಂದ ಬೆಳಕಿಗೆ ನನ್ನನ್ನು ಕರೆದುಕೊಂಡು ಬಂದು ಬೆಳಕಿನ ಮಗುವಂತೆ ಮಾಡಿದನು. 1 ಪೇತ್ರ 2:9

5. ನಾನು ದೇವರ ಮಗುವಾಗಿದ್ದೇನೆ. ಪವಿತ್ರಾತ್ಮನಾದಾತನು ತಾನೇ ನನ್ನ ಆತ್ಮದೊಂದಿಗೆ ಸಾಕ್ಷಿಕೊಟ್ಟಿದ್ದಾನೆ. ರೋಮಾ.8:16.

6. ನಾನು ರಾಜಾಧಿರಾಜನ ಮಗುವಾದ್ದರಿಂದ ನನಗೆ ಸ್ವತಂತ್ರತೆಯೂ ಬಾಧ್ಯತೆಯೂ ಉಂಟು.

ಮೆ

7. ನಾನು ದೇವರಿಗೆ ಬಾಧ್ಯನು ಕ್ರಿಸ್ತನೊಂದಿಗೆ ಬಾಧ್ಯನೂ ಆಗಿದ್ದೇನೆ. ರೋಮಾ.8:17

8. ನಾನು ದೇವರ ಮಗುವಾಗಿದ್ದರಿಂದ ನನಗೆ ಪ್ರಾಪ್ತವಾಗಿರುವ ಸ್ವಾಸ್ತ್ಯವು ಸಿಕ್ಕಿತು. ಕೀರ್ತ.16:6

9. ನಾನು ಕರ್ತನ ಮಗುವಾದ್ದರಿಂದ ಆತನ ವಾಗ್ದಾನಗಳೆಲ್ಲವೂ ನನಗೆ ಸ್ವಂತವಾಗಿವೆ.

10. ನಾನು ಆತನ ವಾಗ್ದಾನದಂತೆಯೇ ನಾನು "ಕರ್ತನ ಸಂತತಿಯವನೆಂದು ಕರೆಯಲ್ಪಡುವೆ." ರೋಮಾ.9:8

11. ಕರ್ತನು ನನ್ನ ಪಾಲೂ ಪಾನವೂ; ಆತನೇ ನನ್ನ ಸ್ವಾಸ್ತ್ಯವೂ ಆಗಿದ್ದಾನೆ. ಕೀರ್ತ.16:5

12. ನಾನು ಜೀವವುಳ್ಳ ದೇವರ ಮಗುವೆಂದು ಕರೆಯಲ್ಪಡುವಂತೆ ನನಗೆ ಅಧಿಕಾರ ಕೊಟ್ಟನು. ರೋಮಾ.9:26

13. ಮಕ್ಕಳಿಗೆ ತಂದೆ ತಾಯಿಗಳು ದ್ರವ್ಯಗಳನ್ನು ಕೂಡಿಸಿ ಕೊಡುವಂತೆ ಕರ್ತನು ನನಗೆ ಮೇಲ್ಮೆಯಾದ ಪರಲೋಕದ ಬೊಕ್ಕಸಗಳನ್ನು ಶೇಖರಿಸುವನು. 2 ಕೊರಿ.12;14.

14. ನಾನು ಕರ್ತನಿಗೆ ಪ್ರಿಯವಾದ ಮಗುವೂ ಆತನನ್ನು ಹಿಂಬಾಲಿಸುವ ಬೆಳಕಿನ ಪುತ್ರರೂ ಆಗಿ ನಡೆದುಕೊಳ್ಳುತ್ತೇವೆ. ಎಫೆ.5:1,8

15. ನಾನು ಕರ್ತನಿಗೆ ನಿರ್ದೋಷ ಮಗುವಾಗಿಯೇ, ವಕ್ರ ಬುದ್ಧಿಯುಳ್ಳ ಮೂರ್ಖ ಜಾತಿಯ ಮಧ್ಯದಲ್ಲಿ ದೇವರ ನಿಷ್ಕಳಂಕ ಮಗುವಾಗಿ ನಡೆದುಕೊಳ್ಳುವೆ. ಫಿಲಿ.2:15

16. ನಾನು ಹಗಲಿನ ಮಗುವಾಗಿರುವೆ. ದೇವರು ನನ್ನೊಂದಿಗಿಟ್ಟ ಬೆಳಕನ್ನು ಕಾಯ್ದುಕೊಳ್ಳುವೆ. 1 ಥೆಸ.5:5.

17. ನಾನು ಕರ್ತನಿಗೆ ವಿಧೇಯನಾದ ಮಗುವಾಗಿದ್ದು ಪರಿಶುದ್ಧತೆಯನ್ನು ಕಾಪಾಡಿಕೊಳ್ಳುವೆ. 1 ಪೇತ್ರ.1:14

18. ನಾನು ದೇವ ಮಗುವೆಂದು ಕರೆಯಲ್ಪಡುವದರಿಂದ ತಂದೆಯು ಎಂಥಾ ಪ್ರೀತಿಯನಿಟ್ಟಿದ್ದಾನೆಂದು ನೋಡಿರಿ. 1 ಯೋಹಾ.3;1

19. ಇಂದಿನಿಂದ ನಾನು ದೇವರ ಮಗುವಾಗಿರುತ್ತೇನೆ. ಕ್ರಿಸ್ತನು ಬೆಳಕಿನವನಾಗಿರುವದರಿಂದ ನಾನು ಆತನನ್ನು ದರ್ಶಿಸುವುದರಿಂದ ಆತನಿಗೆ ನಾನು ಒಪ್ಪಿಗೆಯಾಗಿರುವೆನು. 1ಯೋಹಾ.3:2

20. ನಾನು ದೇವ ಮಗುವಾಗಿರುವುದರಿಂದ ನಾನು ಸೈತಾನನನ್ನು ಜೈಯಿಸುವೆನು. ಯಾಕೆಂದರೆ ಲೋಕದಲ್ಲಿರುವವನಿಗಿಂತ ನಿಮ್ಮೊಳಗಿರುವಾತನು ಹೆಚ್ಚಿನವನು. 1ಯೋಹಾ.4:4

21. ನಾನು ಸತ್ಯವಂತನಾಗಿ ನಡೆಯುವದನ್ನು ಕಂಡು ಕರ್ತನು ನನ್ನನ್ನು ನೋಡಿ ಬಹಳ ಆನಂದಿಸುವನು. 2 ಯೋಹಾ.1:4

22. ನಾನು ಯೇಸು ಕ್ರಿಸ್ತನ ಮೂಲಕವಾಗಿ ಅಬ್ರಹಾಮನ ಮಗನೂ ದಾವೀದನ ಸಂತತಿಯವನೂ ಆಗಿದ್ದೇನೆ; ಅಬ್ರಹಾಮನಿಗೆ ಕೊಡಲ್ಪಟ್ಟಿರುವ ವಾಗ್ದಾನಗಳೆಲ್ಲವೂ ನನಗೆ ಸ್ವಂತ. ರೋಮಾ.9:7, ಮತ್ತಾ.1:1

23. ಪುನರುತ್ಥಾನವನ್ನು ಹೊಂದಿದವರಾಗಿದ್ದು ದೇವದೂತರರಿಗೆ ಸರಿಸಮಾನರೂ ದೇವರ ಮಕ್ಕಳೂ ಆಗಿದ್ದೇವೆ. ಲೂಕ 20:36

24. ನಾನು ಪರತ್ಪರನ ಮಗುವಾಗಿರುವದರಿಂದ ಶತ್ರುಗಳನ್ನು ಪ್ರೀತಿಸಿ ಒಳ್ಳೆಯದನ್ನು ಮಾಡುತ್ತೇನೆ. ಧೈರ್ಯವನ್ನು ಬಿಡದೆ.ಸಾಲ ಕೊಡಿರಿ. ಲೂಕ 6:35.

25. ನಾನು ದೇವ ಮಗುವಾಗಿ ಬೆಳೆದು ಆತ್ಮದಲ್ಲಿ ಬಲಗೊಂಡು ಜ್ಞಾನದಿಂದ ಬೆಳೆಯುವೆನು. ದೇವರ ಕೃಪೆಯು ನನ್ನ ಮೇಲಿರುತ್ತದೆ. ಲೂಕ 2:40.

26. ನಾನು ಶಿಶುಭಾವದಿಂದ ತಗ್ಗಿಸಿಕೊಂಡು ದೇವರ ರಾಜ್ಯವನ್ನು ಅಂಗೀಕರಿಸುತ್ತೇನೆ. ನಾನು ನಿಶ್ಚಯವಾಗಿ ಅದರಲ್ಲಿ ಪ್ರವೇಶಿಸುವೆನು. ಮಾರ್ಕ 10:15.

27. ನಾನು ಮಗುವಾಗಿರುವುದರಿಂದ ಮಕ್ಕಳ ರೊಟ್ಟಿಯಾಗಿರುವ ದೈವೀಕ ಸುಖವೂ ದೈವೀಕ ಆರೋಗ್ಯವೂ ನನಗುಂಟು. ಮತ್ತಾ.15:26

28. ನಾನು ನನ್ನ ಮಕ್ಕಳಿಗೆ ಒಳ್ಳೆಯ ಪದಾರ್ಥಗಳನ್ನು ಕೊಡಲು ತಿಳಿದವನಾಗಿರುವುದರಿಂದ ಪರಲೋಕ ತಂದೆಯು ನನಗೆ ಪರಿಶುದ್ಧಾತ್ಮನ ವರಗಳನ್ನೂ ಒಳ್ಳೆಯ ಫಲಗಳನ್ನೂ ಒಳ್ಳೆ ಪದಾರ್ಥಗಳನ್ನೂ ಕೊಡಲು ತಿಳಿದಿರುನು. ಮತ್ತಾ.7:11

29. ತಂದೆಯು ಮಕ್ಕಳನ್ನು ಕನಿಕರಿಸುವಂತೆ ಕರ್ತನು ತನ್ನಲ್ಲಿ ಭಯಭಕ್ತಿಯುಳ್ಳವರನ್ನು ಕನಿಕರಿಸುತ್ತಾನೆ. ಕೀರ್ತ.103:13.

30. ಒಬ್ಬ ಹೆಂಗಸು ತಾನು ಹೆತ್ತ ಮಗುವಿನ ಮೇಲೆ ಕರುಣೆಯಿಡದೆ ತನ್ನ ಮೊಲೆ ಕೂಸನ್ನು ಮರೆತಾಳೇ? ಒಂದು ವೇಳೆ ಮರೆತಾಳು ನಾನಾದರೆ ನಿನ್ನನ್ನು ಮರೆಯೆ. ನನ್ನ ದೇವರು ಎಂದಿಗೂ ನನ್ನನ್ನು ಮರೆಯುವದಿಲ್ಲ. ಯೆಶಾ.49:15

31. ತಾಯಿ ಮಗನನ್ನು ಸಂತೈಸುವ ಪ್ರಕಾರ ನಾನು ನಿನ್ನನ್ನು ಸಂತೈಸುವೆನು. ಯೆರೂಸಲೇಮಿನಲ್ಲೇ ನಿನಗೆ ದುಃಖ ಶಮನವಾಗುವುದು. ಯೆಶಾ.66:13

## 2. ನಾನು ಬಲಹೀನನಲ್ಲ... ಬಲಶಾಲಿ

32. ನಾನು ಬಲಹೀನನಲ್ಲ, ಕಾರಣ ನನ್ನ ಬಲಹೀನತೆಯಲ್ಲಿ ಕರ್ತನ ಬಲವು ಪೂರ್ಣವಾಗಿ ತುಂಬಿರುವುದು. ನಾನು ಬಲಶಾಲಿ. 1ಕೊರಿ.12:9.

33. ನನ್ನಲ್ಲಿ ಬಲಪಡಿಸುವಾತನಲ್ಲಿದ್ದುಕೊಂಡು ಎಲ್ಲಕ್ಕೂ

ಶಕ್ತನಾಗಿದ್ದೇನೆ. ಫಿಲಿ.4:13

34. ನಾನು ದರಿದ್ರನೂ, ಇಕ್ಕಟ್ಟಿನ ತೊಂದರೆಯಲ್ಲಿರುವವನೂ ಅಲ್ಲ; ಕಾರಣ ನನ್ನ ದೇವರು ಕ್ರಿಸ್ತೇಸುನಿನ ಮೂಲಕ ತನ್ನ ಪ್ರಭಾವದ ಐಶ್ವರ್ಯಕ್ಕೆ ತಕ್ಕ ಹಾಗೆ ನಮ್ಮ ಪ್ರತಿಯೊಂದು ಕೊರತೆಯನ್ನು ನೀಗಿಸುವನು. ಫಿಲಿ.4:19

35. ನಾನು ಯಾವುದಕ್ಕೂ ಭಯಪಡುವದಿಲ್ಲ. ಕಾರಣ ದೇವರು ನನಗೆ ಕೊಟ್ಟಿರುವ ಆತ್ಮವು ಬಲ ಪ್ರೀತಿ ಶಿಕ್ಷಣಗಳ ಆತ್ಮವೇ ಹೊರತು ಹೇಡಿತನದ ಆತ್ಮವಲ್ಲ. 2 ತಿಮೋ.1:7

36. ನನಗೆ ವಿಶ್ವಾಸವೂ ನಂಬಿಕೆಯೂ ಇಲ್ಲ ಎಂದು ಹೇಳುವದಿಲ್ಲ, ಯಾಕೆಂದರೆ ಕರ್ತನು ನನಗೆ ಬೇಕಾದ ವಿಶ್ವಾಸವನ್ನು ಕೊಟ್ಟಿದ್ದಾನೆ. ರೋಮಾ.12:3

37. ನಾನು ಬಲಹೀನತೆಯ ಕುರಿತು ಮಾತಾಡುವದಿಲ್ಲ ಕಾರಣ ಕರ್ತನು ತನ್ನ ಪ್ರಾಣದ ಆಧಾರವು ಆಗಿದ್ದಾನೆ ಯಾರಿಗೂ ಹೆದರುವದಿಲ್ಲ. ಕೀರ್ತ.27:1

38. ನಾನು ಸೈತಾನನ್ನು ಕುರಿತು ಇಂದಿನಿಂದ ದಿನವೂ ಮಾತಾಡುವದಿಲ್ಲ. ಯಾಕೆಂದರೆ ಲೋಕದಲ್ಲಿರುವವನಿಗಿಂತ(ಸೈತಾನ) ನಿಮ್ಮಲ್ಲಿರುವಾತನು ಹೆಚ್ಚಿನವನಾಗಿರುವುದರಿಂದ. 1ಯೋಹಾ.4:4.

39. ನನ್ನ ಸೋಲಿನ ಕುರಿತಾಗಿ ಒಂದು ದಿನವೂ ಮಾತಾಡುವದಿಲ್ಲ. ಯಾಕೆಂದರೆ ದೇವರು ಯಾವಾಗಲೂ ನನ್ನನ್ನು ಕ್ರಿಸ್ತನಲ್ಲಿ ಜಯವನ್ನು ಹೊಂದುವಂತೆ ಮಾಡಿದ್ದಾನೆ.

40. ಎಲ್ಲಾ ಸ್ಥಳಗಳಲ್ಲಿಯೂ ದೇವರು ತನ್ನನ್ನು ತೆಗೆದುಕೊಂಡು ನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿ ಜ್ಞಾನವೆಂಬ ಸುವಾಸನೆ ಯನ್ನು ನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿ ವ್ಯಾಪನಗೊಳಿಸು ತ್ತಾನೆ. 2 ಕೊರಿ.2:14.

41. ನನಗೆ ಬುದ್ಧಿ ಜ್ಞಾನವಿಲ್ಲವೆಂದು ಹೆಚ್ಚಳಪಡುವುದಿಲ್ಲ. ಯಾಕೆಂದರೆ ಕ್ರಿಸ್ತನೇ ನನಗೆ ಜ್ಞಾನವೂ ನೀತಿಯೂ ಪರಿಶುದ್ಧನೂ ಎಲ್ಲವೂ ಆತನೇ ಆಗಿದ್ದಾನೆ. 1 ಕೊರಿ.1:31

42. ನಮ್ಮ ಬೇನೆಗಳನ್ನೂ ಬಲಹೀನತೆಯನ್ನೂ ಕುರಿತಾಗಿ ಮಾತಾಡುವುದಿಲ್ಲ. ಕಾರಣ ಕ್ರಿಸ್ತನು ತಾನೇ ನಮ್ಮ ಬೇನೆ ಗಳನ್ನು ತಾನೇ ತೆಗೆದುಕೊಂಡು ನಮ್ಮ ರೋಗಗಳನ್ನು ಹೊತ್ತು ಕೊಂಡನು. ಮತ್ತಾ.8:17 ಆತನ ಬಾಸುಂಡೆಗಳಿಂದ ನಮಗೆ ಗುಣವಾಯಿತು. ಯೆಶಾ.53:5

43. ನಮ್ಮ ಚಿಂತೆಗಳನ್ನೂ ನಮ್ಮ ದುಃಖಗಳನ್ನೂ ಕುರಿತಾಗಿ ಮಾತಾಡುವದಿಲ್ಲ. ಕ್ರಿಸ್ತೇಸುವೇ ನಮಗೋಸ್ಕರ ಚಿಂತಿಸು ತ್ತಾನೆ. ಆದ್ದರಿಂದ ನಮ್ಮ ದುಃಖಗಳನ್ನೆಲ್ಲಾ ಆತನ ಮೇಲೆ ಹಾಕಿರುವೆವು. 1 ಪೇತ್ರ 5:7

44. ದಾಸತ್ವದ ಕುರಿತಾಗಿ ಮಾತಾಡಿಕೊಳ್ಳುವ ಅವಶ್ಯಕತೆಯಿಲ್ಲ. ಕಾರಣ ಮಗನು ನನ್ನನ್ನು ಬಿಡುಗಡೆ ಮಾಡಿದ್ದಾನೆ. ಯೋಹಾ.8:36. ಸತ್ಯವು ನನ್ನನ್ನು ಬಿಡುಗಡೆ ಮಾಡುತ್ತದೆ. ಯೋಹಾ.8:32. ದೇವರಾತ್ಮನು ನನ್ನನ್ನೂ ಬಿಡುಗಡೆ ಮಾಡಿದ್ದಾನೆ. 2ಕೊರಿ.3:17

45. ದಂಡನೆಯನ್ನು ಕುರಿತೋ ಆಜ್ಞೆಯ ತೀರ್ಪುಗಳನ್ನು ಕುರಿತೋ ನಾನು ಅನಾವಶ್ಯಕವಾಗಿ ಮಾತಾಡುವುದಿಲ್ಲ. ಕಾರಣ ಕ್ರಿಸ್ತೇಸುವಿನಲ್ಲಿದ್ದು ಶರೀರದ ಪಾಪದ ದೆಸೆಯಿಂದ ನಡೆಯದೆ ಆತ್ಮನಿಂದ ನಡೆದ ನನಗೆ ಆಜ್ಞೆಯ ತೀರ್ಪಿಲ್ಲ. ರೋಮಾ.8:1

## 3. ನನ್ನ ಮನೆಯು ಆಶೀರ್ವದಿಸಲ್ಪಡುವುದು

46. ನಾನು ಕರ್ತನವನು, ಆತನು ನನ್ನವನು, ನನ್ನ ನಿವಾಸವು ದೇವರ ಪ್ರಸನ್ನತೆಯಿಂದ ತುಂಬಿಸಲ್ಪಟ್ಟಿರುವ ಮನೆ. ನನ್ನ ಮನೆಯಲ್ಲಿ ದೇವದೂತರು ಇಳಿದು ಬಂದು ಚಲಿಸುತ್ತಿರುವರು.

47. ಕ್ರಿಸ್ತನೇ ನನ್ನ ನಿವಾಸದ ಯಜಮಾನನೂ ಶಿರಸ್ಸೂ ನನ್ನ ಅತಿಥಿಯೂ ಹೌದು. ಆತನ ಪ್ರಸನ್ನತೆಯಿಂದ ನನ್ನ ಮನೆಯು ತುಂಬಿರುವದು.

48. ನನ್ನ ನಿವಾಸವು ಸಕಲ ಜಾತಿಗಳಿಗೂ ಪ್ರಾರ್ಥನಾ ಮಂದಿರ ವಾಗಿರುವದು. ಪ್ರಾರ್ಥನಾತ್ಮನಿಂದಲೂ ವಿಜ್ಞಾಪನೆ

ಯಿಂದಲೂ ನಾನೂ ನನ್ನ ಕುಟುಂಬವರು ತುಂಬಿರುತ್ತೇವೆ.
ಯೆಶಾ.56:7; ಮತ್ತಾ.21:13

49. ನಾನೂ ನನ್ನ ಮನೆಯವರೂ ಯೆಹೋವನನ್ನೇ ಸೇವಿಸುತ್ತೇವೆ.
ಯೆಹೋ.24:15.

50. ನನ್ನ ಹೆಂಡತಿಯು ಫಲಭರಿತವಾದ ದ್ರಾಕ್ಷಾಲತೆಯಂತಿರುವಳು. ನನ್ನ ಮಕ್ಕಳು ಎಣ್ಣೆಮರದ ಸಸಿಗಳಂತಿರುವವರು.
ಕೀರ್ತ.128:3

51. ನನ್ನ ಮಕ್ಕಳು ಊಟದ ಮಣೆಯ ಸುತ್ತಲೂ ಕೂತುಕೊಳ್ಳುವರು. ಕೀರ್ತ.128:3

52. ಸನ್ಮಾರ್ಗವನ್ನನುಸರಿಸಿ ನಡೆಯುವೆನು. ನನ್ನ ಮನೆಯಲ್ಲಿ ಉತ್ತಮವಾದ ಶುದ್ಧ ಹೃದಯದಿಂದ ನಡೆಯುವೆನು
ಕೀರ್ತ.101:2

53. ನಾನು ಪರದೇಶಿಯಾಗಿ ನೆಲೆಸುವ ನಿವಾಸದಲ್ಲಿ ನನ್ನ ದೇವರ ನಿಬಂಧನೆಗಳು ನನಗೆ ಗಾಯನವಾದವು. ಕೀರ್ತ.119:54

54. ನನ್ನ ನಿವಾಸವು ದೇವರ ಕುಟುಂಬವಾದಾತನ ನಿವಾಸ; ನನ್ನ ನಿವಾಸದಲ್ಲಿ ಕ್ರಿಸ್ತನ ರಕ್ತವು ಪ್ರೋಕ್ಷಿಸಲ್ಪಟ್ಟದೆ.
ವಿಮೋ.18:3,13

55. ಕೇಡು ನನಗೆ ಸಂಭವಿಸದು. ಉಪದ್ರವವು ನನ್ನ ಗುಡಾರದ

ಸಮೀಪಕ್ಕೂ ಬಾರದು. ಕೀರ್ತ.91:10

56. ನಿನ್ನ ನಿವಾಸದ ಅಲಂಕಾರವು ಕರ್ತನ ವಚನಗಳು. ಅವುಗಳನ್ನು ನಮ್ಮ ಮನೆ ಬಾಗಿಲ ಮೇಲೆಯೂ ನಿಲವು ಪಟ್ಟಿಗಳಲ್ಲಿಯೂ ಹೊರಬಾಗಿಲಿನ ತಲೆಯ ಮೇಲೆಯೂ ಇವುಗಳನ್ನು ಬರೆಯಬೇಕು. ಧರ್ಮೋ.6:9

57. ನಾನು ನನ್ನ ಮನೆಯವರೊಡನೆ ಕರ್ತನ ವಾಗ್ದಾನಗಳನ್ನು ನಿಬಂಧನೆಗಳನ್ನು ಕುರಿತು ತಿಳಿಸುವೆನು. ಧರ್ಮೋ.6:7, 11:20

58. ಅಸಹ್ಯವಾದ ವಿಗ್ರಹಗಳನ್ನೂ ಕರ್ತನಿಗೆ ಪ್ರಿಯವಿಲ್ಲವಾದದ್ದನ್ನೂ ನನ್ನ ಮನೆಗೆ ತೆಗೆದುಕೊಂಡು ಬರುವದಿಲ್ಲ. ಧರ್ಮೋ.7:26

59. ಸದಾಕಾಲವೂ ನನ್ನ ಮುಂಭಾಗದಲ್ಲಿರುವಂತೆ ಆಶೀರ್ವದಿಸು. 1ಪೂರ್ವ.17:27

60. ಕರ್ತನಾಗಿರುವ ದೇವರು ಅದನ್ನು ಆಶೀರ್ವದಿಸಿದ್ದರಿಂದ ಅದು ಯಾವಾಗಲೂ ಆಶೀರ್ವದಿಸಲ್ಪಟ್ಟಿದೆ. 1ಪೂರ್ವ.17:27

61. ನನ್ನ ಮನೆಯನ್ನು ಕಟ್ಟುತ್ತೇನೆಂದು ನನ್ನ ದೇವರಾಗಿರುವ ನೀನು ನಿನ್ನ ಸೇವಕನಿಗೆ ತಿಳಿಸಿದ್ದಿ. 1ಪೂರ್ವ.17:25

62. ಜ್ಞಾನವೆಂಬಾಕೆಯು ತನ್ನ ಮನೆಯನ್ನು ಕಟ್ಟುವಳು. ಕಂಬ

ಗಳನ್ನು ಕಡಿದು ತನ್ನ ಮನೆಯನ್ನು ಕಟ್ಟಿಕೊಂಡಿದ್ದಾಳೆ. ಆಗ ಕರ್ತನಿಗಾಗಿ ಆತ್ಮೀಕ ಮನೆಯನ್ನು ಕಟ್ಟುತ್ತೇನೆ. ಜ್ಞಾನೋ.9:1

63. ಸಜ್ಜನರ ಮನೆಯು ಸ್ಥಿರವಾಗಿ ನಿಲ್ಲುವಂತೆ ಎಂದು ಸತ್ಯವೇದ ತಿಳಿಸಿರುವಂತೆ ನನ್ನ ಮನೆಯು ಸ್ಥಿರವಾಗಿ ನಿಲ್ಲುವುದು. ಜ್ಞಾನೋ.123:7

64. ಶಿಷ್ಟನ ಮನೆಯಲ್ಲಿ ದೊಡ್ಡ ನಿಧಿ ಉಂಟು. ಜ್ಞಾನೋ.15:6

65. ಮನೆಮಾರು ಆಸ್ತಿಪಾಸ್ತಿಯು ಪಿತೃಗಳಿಂದ ದೊರಕುವವು. ಕರ್ತನೇ ನನ್ನ ಬಾಧ್ಯತೆಯಾಗಿರುವನು. ಜ್ಞಾನೋ.19:14

66. ನಮ್ಮ ಮನೆಯು ಆಶೀರ್ವಾದಕ್ಕೆ ನೆಲೆಯಾಗಿರುವಂತೆ ಮೊದಲನೆಯ ಹಿಟ್ಟನ್ನು ಯಾಜಕರಿಗೆ ಕೊಡತಕ್ಕದ್ದು. ದೇವರ ಸೇವಕರಿಗೆ ನನ್ನ ಕೈಲಾದ್ದನ್ನು ಕೊಟ್ಟು ಘನಪಡಿಸುವೆನು. ಯೆಹೆ.44:30

67. ಕರ್ತನಾಗಿರುವ ದೇವರ ವಾಕ್ಯದ ಬೆಳಕು ನನ್ನ ಮನೆಯಲ್ಲಿ ಎಲ್ಲರಿಗೂ ಬೆಳಕನ್ನು ಕೊಡುತ್ತದೆ. ಮತ್ತಾ.5:15

68. ನನ್ನ ಮನೆಯು ಬೆಟ್ಟದ ಮೇಲೆ ಕಟ್ಟಲ್ಪಟ್ಟಂತೆ ಕ್ರಿಸ್ತನ ಮೇಲೆ ಕಟ್ಟಲ್ಪಟ್ಟ ಮನೆಯಾಗಿ ಸ್ಥಿರವಾಗಿರುವುದು. ಮತ್ತಾ.7:24

69. ಕರ್ತನು ನನಗೆ ಮಾಡಿದ ಎಲ್ಲವನ್ನೂ ನನ್ನ ಮನೆಗೆ ಬರುವಂತೆ ತಿಳಿಸುತ್ತೇನೆ. ಮಾರ್ಕ 5:19; ಲೂಕ 8:39.

70. ಜಕ್ಕಾಯನ ಮನೆಯಲ್ಲಿ ಇಳಿದುಕೊಂಡ ಯೇಸು ನನ್ನ ಮನೆಯಲ್ಲಿ ಎಂದೆಂದೂ ನೆಲಸುವನು. ಲೂಕ 19:5

71. ನನ್ನ ಮನೆಗೆ ರಕ್ಷಣೆಯು ಬಂದಿತು. ನೀತಿವಂತನಾದ ನನ್ನ ಗುಡಾರದಲ್ಲಿ ರಕ್ಷಣೆಯ ಗಂಭೀರ ಸ್ವರವುಂಟು. ಲೂಕ 19:9

72. ನನ್ನ ನಿವಾಸವು ಸಂಪೂರ್ಣವಾಗಿ ಕ್ರಿಸ್ತನ ವಿಷಯವಾಗಿ ತಿಳಿಸುವ ತಿಳುವಳಿಕೆ ವಿವೇಕದ ಪರಿಮಳದಿಂದ ತುಂಬಿರುತ್ತದೆ. ಯೋಹಾ.12:3

73. ಮೋಶೆಯು ಕರ್ತನ ಮನೆಯಲ್ಲಿ ಹೇಗೆ ನಂಬಿಗಸ್ತನಾಗಿದ್ದಾನೋ ಹಾಗೆ ಕರ್ತನ ಮನೆಯಲ್ಲಿ ನಾನು ಯಾವಾಗಲೂ ನಂಬಿಗಸ್ತನಾಗಿರುವೆನು. ಅರಣ್ಯ.12:7

74. ದೇವರಿಂದ ಕಟ್ಟಲ್ಪಟ್ಟ ಕೈಕೆಲಸವಲ್ಲದ ನಿತ್ಯವಾದ ಮನೆಯು ಪರಲೋಕದಲ್ಲಿ ನನಗುಂಟು. 2 ಕೊರಿ.5:1

75. ನನ್ನ ತಂದೆಯ ಮನೆಯಲ್ಲಿ ಅನೇಕ ಬಿಡಾರಗಳುಂಟು. ಯೇಸು ಕ್ರಿಸ್ತನು ನನಗಾಗಿ ಒಂದು ವಾಸ ಸ್ಥಳವನ್ನು ಸಿದ್ಧ ಮಾಡಲು ಹೋಗಿರುವನು. ಯೋಹಾ.14:2,3

# 4. ಆಶೀರ್ವದಿಸಲ್ಪಟ್ಟ ಮಕ್ಕಳು

76. ವಾಗ್ದಾನ ಮಾಡಲ್ಪಟ್ಟದ್ದು ನನಗೂ ನನ್ನ ಸಂತತಿಗೂ ನನ್ನ ದೇವರಾಗಿರುವ ಕರ್ತನು ಕಳಿಸಲ್ಪಡುವ ದೂರದಲ್ಲಿರುವ ವರೆಲ್ಲರಿಗೂ ಉಂಟಾಗಿದೆ. ಅ.ಕೃ.2:39

77. ನಾನು ನನಗೆ ಕೊಡಲ್ಪಟ್ಟ ಮಕ್ಕಳು ಚೀಯೋನ್ ಪರ್ವತದಲ್ಲಿ ವಾಸವಾಗಿರುವ ಸೇನಾಧೀಶ್ವರನಾದ ಕರ್ತನಿಂದುಂಟಾದ ಗುರುತುಗಳಾಗಿಯೂ ಅದ್ಭುತವಾಗಿಯೂ ಇಸ್ರಾಯೇಲ್ಯರ ಮಧ್ಯದಲ್ಲಿದ್ದೇವೆ. ಯೆಶಾ.8:18; ಇಬ್ರಿ.2:13

78. ಮಕ್ಕಳೆಲ್ಲರು ಯೆಹೋವನಿಂದ ಶಿಕ್ಷಿತರಾಗುವರು. ಅವರಿಗೆ ಅಧಿಕ ಸುಕ್ಷೇಮವಾಗುವದು. ಯೆಶಾ.54:13.

79. ನನ್ನ ಯೌವನದಲ್ಲಿ ಹುಟ್ಟಿದ ಮಕ್ಕಳು ಯುದ್ಧವೀರನ ಕೈಯಲ್ಲಿರುವ ಅಂಬುಗಳಂತಿದ್ದಾರೆ. ಕೀರ್ತ.127:4

80. ನನ್ನ ಯೌವನ ಪ್ರಾಯದ ಕುಮಾರರು ಬಲಶಾಲಿಗಳೂ, ಕೈಗಳಲ್ಲಿನ ಅಂಬುಗಳೂ ಆಗಿರುವರು. ಕೀರ್ತ.127:5

81. ನನ್ನ ಮಕ್ಕಳು ಊಟದ ಮಣೆಯ ಸುತ್ತಲೂ ಕೂತುಕೊಳ್ಳುವ ಎಣ್ಣೆ ಮರದ ಸಸಿಗಳಂತಿರುವರು. ಕೀರ್ತ.128:3

82 ಕರ್ತನ ರೆಕ್ಕೆಗಳ ಕೆಳಗೆ ನನ್ನ ಮಕ್ಕಳಿಗೆ ಸ್ವಸ್ಥತೆಯುಂಟು ಮಾಡುವ ಆರೋಗ್ಯ ಕಿರಣಗಳುಂಟು. ಮಲಾ.4:2

83. ಅವು ಹೊರಟು ಹೋಗಿ ಕೊಬ್ಬಿದ ಕರುಗಳಂತೆ ವೃದ್ಧಿ
ಗೊಳ್ಳುವರು. ಮಲಾ.4:2

84. ಆ ಹುಡುಗನ ಮೊರೆಯು ದೇವರಿಗೆ ಕೇಳಿಸಿತು. ದೇವದೂತನು ಆಕಾಶದಿಂದ ಹಾಗರಳನ್ನು ಕರೆದು ಹಾಗರಳೇ ನಿನಗೇನಾಯಿತು? ಅಂಜಬೇಡ ಆ ಹುಡುಗನು ಬಿದ್ದರುವ ಸ್ಥಳದಿಂದಲೇ ಅವನ ಶಬ್ದವು ದೇವರಿಗೆ ಕೇಳಿಸಿತು. ಆದಿ.21:17

85. ದೇವರು ತನ್ನ ಮಕ್ಕಳೊಡನಿರುತ್ತಾನೆ. ಅವರು ಬೆಳೆದು ಶೂರರಾಗಿ ಕಾಣಲ್ಪಡುವರು. ಜ್ಞಾನವೂ ತಿಳುವಳಿಕೆಯೂ ಹೊರಟು ವಿವೇಕವು ಅವರಿಗುಂಟು. ಆದಿ.21:17

86. ಇಸ್ರಾಯೇಲ್ಯರೂ ಅತನ ಮಕ್ಕಳು ಪಸ್ಕದ ಕುರಿಯ ರಕ್ತದ ಮೂಲಕ ಕಾಯಲ್ಪಟ್ಟು ರಕ್ಷಿಸಲ್ಪಟ್ಟಂತೆ ನಾನೂ ನನ್ನ ಮಕ್ಕಳು ಕ್ರಿಸ್ತನ ರಕ್ತದ ಮೂಲಕ ಕಾಯಲ್ಪಡುತ್ತೇವೆ ವಿಮೋ.12:13.

87. ನನ್ನ ಸಂತತಿಯ ಮೇಲೆ ಕರ್ತನ ಅತ್ಮವು ನನ್ನ ಸಂತಾನದ ಮೇಲೆ ದೇವರ ಆಶೀರ್ವಾದವು ಸುರಿಸಲ್ಪಡುತ್ತದೆ ಯೆಶಾ.44:3

88. ನನ್ನ ಮೇಲಿರುವ ದೇವರ ಆತ್ಮನೂ ನನ್ನ ಬಾಯಲ್ಲಿ ಉಂಟಾಗುವ ದೇವರ ವಾಕ್ಯಗಳು ಇಂದಿನಿಂದ ಮೊದಲುಗೊಂಡು ಎಂದೆಂದಿಗೂ ನನ್ನ ಬಾಯಿಂದಲೂ ನನ್ನ ಸಂತತಿಯ

ಬಾಯಿಂದಾಗಲಿ ನಿಮ್ಮ ಸಂತತಿಯ ಬಾಯಿಂದಾಗಲಿ ಇಂದಿನಿಂದ ಎಂದೆಂದಿಗೂ ತೊಲಗುವದಿಲ್ಲ. ಯೆಶಾ.59:21

89. ನನ್ನ ಮಕ್ಕಳೇ ಕರ್ತನ ಕೈಯಲ್ಲಿ ನಿಮ್ಮನ್ನು ಒಪ್ಪಿಸಿದಾಗ ಅಂದಿನಿಂದ ಆತನು ನಮ್ಮನ್ನು ಕಾಯ್ದುಕೊಳ್ಳಲು ಶಕ್ತನಾಗಿದ್ದಾನೆ. 2ತಿಮೋ.1:12

90. ಕರ್ತನ ಕ್ರಿಯೆಯು ನನಗೂ ಆತನ ಪ್ರಭಾವವು ನನ್ನ ಮಕ್ಕಳಿಗೂ ಪ್ರಕಟವಾಗಲಿ. ಕೀರ್ತ.90:16.

91. ನನ್ನ ಮಕ್ಕಳು ಬಾಳುವರು. ನನ್ನ ಸಂತತಿಯು ಕರ್ತನ ಮುಂಭಾಗದಲ್ಲಿ ಸ್ಥಿರವಾಗಿರುವರು. ಕೀರ್ತ.102:28

92. ಕರ್ತನ ಕೃಪೆಯೋ ಅತನಿಗೆ ಭಯಪಟ್ಟು ನನ್ನ ಮೇಲೆಯೂ ಕರ್ತನ ನೀತಿ ನನ್ನ ಮಕ್ಕಳ ಮಕ್ಕಳ ಮೇಲೆ ಅನಾದಿಕಾಲದಿಂದ ನಿರಂತ್ರವಾಗಿರುವದು. ಕೀರ್ತ.103:17

93. ನಾನು ಕರ್ತನಿಗೆ ಭಯಪಟ್ಟು ಜೀವಿಸುವದರಿಂದ ನನ್ನ ಮಕ್ಕಳ ಮಕ್ಕಳು ಇಸ್ರಾಯೇಲ್ಯರಿಗೆ ಉಂಟಾಗುವ ಸಮಾಧಾನವನ್ನು ಕಾಣುವೆವು. ಕೀರ್ತ.128:6

94. ಕರ್ತನು ನನ್ನ ಹೆಬ್ಬಾಗಿಲುಗಳ ಅಗಳಿಗಳನ್ನು ಬಲಪಡಿಸಿ ನನ್ನ ಮಕ್ಕಳನ್ನೂ ಬಲಪಡಿಸಿ ಆಶೀರ್ವದಿಸುವನು. ಕೀರ್ತ.147:13

95. ನಾನು ನನ್ನ ಮಕ್ಕಳ ಮಕ್ಕಳಿಗೆ ಆಸ್ತಿಯನ್ನೂ ಬಾಧ್ಯತೆಯನ್ನೂ

ಬಿಟ್ಟು ಹೋಗುತ್ತೇನೆ. ಪಾಪಿಯ ಸ್ವಾಸ್ಥ್ಯವು ನನಗೆ ಸಂಗ್ರ
ವಾಗಿಬಿಟ್ಟಿದೆ. ಜ್ಞಾನೋ.13:22

96. ಕರ್ತನಿಗೆ ಭಯಪಡುವವನಿಗೆ ದೃಢವಾದ ನಂಬಿಕೆಯುಂಟು
ನನ್ನ ಮಕ್ಕಳಿಗೆ ಆಶ್ರಯವುಂಟು. ಜ್ಞಾನೋ.14:26

97. ನಿನ್ನ ಮಕ್ಕಳಿಗೆಲ್ಲರಿಗೂ ನಾನು ಕಿರೀಟವಾಗಿರುವೆನು ಜ್ಞಾನೋ.17:

98. ನಾನು ಉತ್ತಮವಾಗಿ ನಡೆದುಕೊಳ್ಳುವೆನು. ನನ್ನ ನಂತರ ನನ
ಮಕ್ಕಳು ಭಾಗ್ಯವಂತರಾಗಿರುವರು. ಜ್ಞಾನೋ.20:7

99. ನನ್ನ ಮಕ್ಕಳು ನೀತಿವಂತರಾಗಿರುವರು. ನಾನು ನಿಶ್ಚಯವಾ
ಆನಂದಿಸುವೆನು. ಜ್ಞಾನೋ.23:24

100. ಜ್ಞಾನವುಳ್ಳವನನ್ನು ಹೆತ್ತದ್ದರಿಂದ ನಾನು ಬಹ
ಸಂತೋಷಿಸುವೆನು. ಜ್ಞಾನೋ.23:24

101. ನನ್ನ ಮಕ್ಕಳು ಎದ್ದು ನನ್ನನ್ನು ಭಾಗ್ಯವಂತನೆಂದು ಹಾಗ
ನನ ಪತ್ನಿಯನ್ನು ಭಾಗ್ಯವತಿಯೆಂದು ಹೇಳುವರು
ಜ್ಞಾನೋ.31:28

## 5. ನಾವು ಕರ್ತನನ್ನೇ ಸೇವಿಸೋಣ

102. ನಾನೂ ನನ್ನ ಮನೆಯವರು ಕರ್ತನನ್ನೇ ಸೇವಿಸುವೆವ
ಯೆಹೋ.24:15

103. ನೋಹನೂ ಅತನ ಕುಟುಂಬದವರು ನಾವೆಯೊಳಗೆ ಪ್ರವೇಶಿಸಿದ ಹಾಗೆ ನಾನೂ ನನ್ನ ಕುಟುಂಬದವರು ಕ್ರಿಸ್ತನಾಗಿರುವ ಕರ್ತನೆಂಬ ನಾವೆಯಲ್ಲಿ ಪ್ರವೇಶಿಸಿದ್ದೇವೆ. ಆದಿ.7:1

104. ಅಬ್ರಹಾಮನು ತನ್ನ ಕುಟುಂಬವನ್ನು ಕರ್ತನ ಹಾದಿಯಲ್ಲಿ ನಡಿಸಿಕೊಂಡು ಬಂದ ಹಾಗೆ ನಾನೂ ನನ್ನ ಕುಟುಂಬದವರನ್ನು ಕರ್ತನ ಮಾರ್ಗದಲ್ಲಿ ನಡಿಸಲು ಕಾಯ್ದುಕೊಳ್ಳುತ್ತೇನೆ. ಆದಿ.18:19

105. ಕ್ರಿಸ್ತೇಸುವನ್ನು ವಿಶ್ವಾಸಿಸುವುದರಿಂದ ನಾನೂ ನನ್ನ ಪರಿವಾರದವರು ರಕ್ಷಿಸಲ್ಪಡುತ್ತೇವೆ. ಅಪೊ.16:31

106. ನಾನೂ ನನ್ನ ಕುಟುಂಬದವರೂ ದೇವರಲ್ಲಿ ಪೂರ್ಣ ವಿಶ್ವಾಸವುಳ್ಳವರಾಗಿದ್ದೇವೆ. ಅಪೊ.16:34

107. ನಾವು ಇನ್ನು ಅನ್ಯರೂ ಪರದೇಶಿಗಳೂ ಅಗಿರದೆ ಪರಿಶುದ್ಧ ಭಕ್ತರೊಡನೆ ಒಂದೇ ಪಟ್ಟಣದವರೂ ದೇವರ ಕುಟುಂಬದವರೂ ಅಗಿರುವೆವು. ಎಫೆ.2:19

108. ನಾವುಗಳು ಕ್ರಿಸ್ತೇಸುವಿನ ಮೇಲೆ ಪವಿತ್ರಾತ್ಮನಿಂದ ದೇವರ ವಾಸಸ್ಥಳವಾಗಿ ಕಟ್ಟಲ್ಪಟ್ಟಿದ್ದೀರಿ. ಎಫೆ.2:22

109. ನಾನು ಕ್ರಿಸ್ತನಲ್ಲಿ ಒಂದಕ್ಕೊಂದು ಹೊಂದಿಕೆಯಾಗಿ ಕರ್ತನಲ್ಲಿ ಪರಿಶುದ್ಧ ಅಲಯವಾಗಿ ಎಬ್ಬಿಸಲ್ಪಟ್ಟಿದ್ದೇವೆ. ಎಫೆ.2:21

## 6. ಅರಿಕೆ ಮಾಡುತ್ತೇನೆ; ಹೊಂದಿಕೊಳ್ಳುತ್ತೇನೆ

110. ನಾನು ಯಾವುದನ್ನು ಅರಿಕೆ ಮಾಡಿಕೊಳ್ಳುವೆನೋ ಅದನ್ನು ಹೊಂದಿಕೊಳ್ಳುವೆನು. ನನ್ನ ಬಾಯಿಯ ಮಾತುಗಳ ಕರ್ತನನ್ನು ಘನಪಡಿಸುತ್ತದೆ. ಜ್ಞಾನೋ.18:21

111. ನಾನು ಹೇಳಿದಂತೆ ಅಗುವದು. ನಾನು ಮಾಡುವುದೆಲ್ಲವ ನೆರವೇರಲ್ಪಡುತ್ತದೆ. ಕೀರ್ತ.1:3

112. ನಾನು ಸತ್ಯವೇದವನ್ನು ನಂಬುತ್ತೇನೆ. ನಾನು ಯಾರೆಂದು ಸತ್ಯವೇದ ಹೇಳುತ್ತದೋ ಆತನೇ ನಾನು.

113. ಯಾಕೆಂದರೆ ಯಾವುದು ಮಾಡಲು ಸಾಧ್ಯವಾಗುತ್ತದೆಂದು ಸತ್ಯವೇದವು ಹೇಳುತ್ತದೋ ಅದೆಲ್ಲವನ್ನೂ ದೇವರ ಬಲದಿಂದಲೇ ಮಾಡಿ ಮುಗಿಸುತ್ತೇನೆ.

114. ನಾನು ದೇವರನ್ನು ನಂಬುತ್ತೇನೆ. ತ್ರೈಯೇಕ ದೇವರಾಗಿರುವ ತಂದೆ ಮಗ ಪರಿಶುದ್ಧಾತ್ಮನನ್ನು ವಿಶ್ವಾಸಿಸುತ್ತೇನೆ. ಆತನು ನನ್ನವನು. ನಾನು ಆತನವನು.

115. ಕರ್ತನಾದ ಯೇಸುವನ್ನು ರಕ್ಷಕನೆಂದು ನಂಬಿ ಅರಿಕೆ ಮಾಡುತ್ತೇನೆ. ರೋಮಾ.10:9 ಇದರಿಂದ ರಕ್ಷಣೆ ಹೊಂದಿಕೊಳ್ಳುತ್ತೇನೆ. ರೋಮಾ.10:10.

116. ಆತನ ಬಾಸುಂಡೆಗಳಿಂದ ನನಗೆ ಗುಣವಾಯಿತೆಂದು ಅರಿ

ಮಾಡುತ್ತೇನೆ. ಯೆಶಾ.53:5. ಇದರಿಂದ ನಾನು ಗುಣ ಹೊಂದಿ ಆರೋಗ್ಯವನ್ನು ಪಡೆದುಕೊಳ್ಳುತ್ತೇನೆ.

117. ಕರ್ತನಾಗಿರುವ ಯೇಸು ನನ್ನನ್ನು ಬಿಡುಗಡೆ ಮಾಡಿದ್ದಾನೆಂದು ಅರಿಕೆ ಮಾಡುತ್ತೇನೆ. ಯೋಹಾ.8:36. ಆದುದರಿಂದ ನಾನು ಬಿಡುಗಡೆಯನ್ನು ಸಮಾಧಾನವನ್ನೂ ಹೊಂದಿದ್ದೇನೆ.

118. ಪರಿಶುದ್ಧಾತ್ಮನಿಂದ ದೇವರ ಪ್ರೀತಿಯು ನನ್ನ ಹೃದಯದಲ್ಲಿ ತುಂಬಿಸಲ್ಪಟ್ಟಿದೆಯೆಂದು ಅರಿಕೆ ಮಾಡುತ್ತೇನೆ. ರೋಮಾ.5:5. ಆದುದರಿಂದ ನಾನು ನನ್ನ ಶತ್ರುಗಳನ್ನು ಸ್ನೇಹಿಸಲು ಸಾಧ್ಯವುಂಟು.

119. ನೀತಿವಂತರು ಸಿಂಹಗಳಂತೆ ಧೈರ್ಯವಾಗಿರುತ್ತಾರೆ ಎಂದು ಅರಿಕೆ ಮಾಡುತ್ತೇನೆ. ಜ್ಞಾನೋ.28:1. ಆದುದರಿಂದಲೇ ಆತ್ಮೀಕ ಯುದ್ಧದಲ್ಲಿ ಧೈರ್ಯವುಳ್ಳವನಾಗಿ ಸೈತಾನನನ್ನು ಜೈಯಿಸುವೆನು.

120. ನನ್ನ ದೇವರಾಗಿರುವ ಕರ್ತನು ನನ್ನನ್ನು ಕೈಬಿಡುವದಿಲ್ಲ. ನನ್ನನ್ನು ತೊರೆಯುವದಿಲ್ಲ. ಆದುರರಿಂದಲೇ ನನ್ನ ಜೀವಿತದ ಒಂದೊಂದು ಹೆಜ್ಜೆಯಲ್ಲಿ ದೈವೀಕ ಪ್ರಸನ್ನತೆಯನ್ನು ಅನುಭವಿಸುವೆನು. ಇಬ್ರಿ.13:5

121. ನಾನು ದೇವರಿಂದ ಹೊಂದಿದ ಅಭಿಷೇಕವು ನನ್ನಲ್ಲಿ ನೆಲೆಗೊಂಡಿರುವುದರಿಂದ ಅರಿಕೆ ಮಾಡುತ್ತೇನೆ.

1ಯೋಹಾ.2:27. ಅದುದರಿಂದಲೇ ಅಭಿಷೇಕದಿಂದ ನೊಗಗಳನ್ನು ಮುರಿದು ಹಾಕುತ್ತೇನೆ.

122. ಯೇಸುವಿನ ನಾಮದ ಬಲದಿಂದ ಸೈತಾನನನ್ನು ಓಡಿಸಿ ಬಿಡಲು ಕರ್ತನು ನನಗೆ ಅಧಿಕಾರ ಕೊಟ್ಟಿದ್ದಾನೆ. ಮಾರ್ಕ 16:17. ಆದುದರಿಂದಲೇ ಆ ಅಧಿಕಾರದಿಂದ ಸ್ವತಂತ್ರಿಸಿಕೊಂಡು ಕಟ್ಟಲ್ಪಟ್ಟ ಜನರನ್ನು ಬಿಡುಗಡೆ ಮಾಡುತ್ತೇನೆ.

123. ವ್ಯಾಧಿ ಪೀಡಿತರ ಮೇಲೆ ಕೈಗಳನ್ನಿಡಲು ಸ್ವಸ್ಥತೆ ಹೊಂದುವರು ಎಂಬ ವಾಕ್ಯದಂತೆ ವ್ಯಾಧಿಪೀಡಿತರನ್ನು ಗುಣ ಹೊಂದುವಂತೆ ಮಾಡಿ ಬಲಹೊಂದಿಕೊಳ್ಳುವೆನು. ಮಾರ್ಕ 16:18

124. ನಾನು ಶತ್ರುವಿನ ಕೈಗಳಿಂದ ಬಿಡಿಸುವೆನು. ಆ ಕಾರಣದಿಂದಲೇ ಅವರು ಕರ್ತನಲ್ಲಿ ಬಿಡುಗಡೆ ಹೊಂದುವರು. ಕೀರ್ತ.107:21

## 7. ನಾನು ನೂತನ ಸೃಷ್ಟಿ

125. ನನಗೆ ಒಂದು ಹೊಸ ಜೀವಿತವುಂಟು. ಕ್ರಿಸ್ತನಲ್ಲಿ ನಾನು ಒಂದು ನೂತನ ಸೃಷ್ಟಿಯಾಗಿದ್ದೇನೆ. ಹಳೇಯದೆಲ್ಲಾ ಹೋಗಿ ಎಲ್ಲಾ ನೂತನವಾಯಿತು. 2ಕೊರಿ.5:17

126. ನನಗೆ ಒಂದು ಹೊಸ ರಾಜ್ಯವುಂಟು. ಅಂಧಕಾರದ ಅಧಿಕಾರದಿಂದ ನನ್ನನ್ನು ಬಿಡುಗಡೆ ಮಾಡಿ ತನ್ನ ಪ್ರೀತಿಯ ಕುಮಾರನೊಡನೆ ರಾಜ್ಯದೊಳಗೆ ನನ್ನನ್ನು ಸೇರಿಸಿದಾತನಿಗೆ ಸ್ತೋತ್ರ

ಮಾಡುತ್ತೇನೆ. ಕೊಲೊ.1:13.

127. ನನಗೆ ಜಯವುಂಟು. ಅಂದರೆ ನಾನು ನನ್ನನ್ನು ಪ್ರೀತಿಸುವಾತ ನಲ್ಲಿದ್ದು ಪೂರ್ಣ ಜಯ ಹೊಂದಿದವನಾಗಿರುತ್ತೇನೆ. ರೋಮಾ.8:37

128. ನನಗೆ ಬಾಧ್ಯತೆಯುಂಟು. ನಾನು ದೇವರಿಗೂ ಕ್ರಿಸ್ತನಿಗೂ ಬಾಧ್ಯನಾಗಿದ್ದೇನೆ. ರೋಮಾ.8:17

129. ನನಗೆ ಆಶೀರ್ವಾದವುಂಟು. ನನ್ನ ದೇವರು ಕ್ರಿಸ್ತನಲ್ಲಿ ಉನ್ನತದಲ್ಲಿ ನನಗೆ ಆತ್ಮೀಕ ವರಗಳನ್ನೂ ಆತ್ಮೀಕ ಆಶೀರ್ವಾದಗಳಿಂದಲೂ ಆಶೀರ್ವಾಸುತ್ತಾನೆ. ಎಫೆ.1:3

130. ನನಗೆ ನಿತ್ಯಜೀವವುಂಟು; ಕುಮಾರನಾಗಿರುವ ನಾನು ಜೀವ ವನ್ನು ಹೊಂದಿದ್ದೇನೆ. ನನ್ನ ಜೀವದೊಡನೆ ಪರಿಪೂರ್ಣ ಹೊಂದುವೆ. ಯೋಹಾ.5:12, 10:10.

131. ನನಗೆ ಬೆಳಕುಂಟು. ಕಾರಣ ನಾನು ಲೋಕಕ್ಕೆ ಬೆಳಕನ್ನು ಕೊಡಲು ಕರೆಯಲ್ಪಟ್ಟಿದ್ದೇನೆ. ಪರ್ವತದಲ್ಲಿರುವ ಪಟ್ಟಣ ವಾಗಿದ್ದೇನೆ. ದೀಪಸ್ತಂಭದ ಮೇಲಿರುವ ಬೆಳಕಾಗಿದ್ದೇನೆ.

132. ನನಗೆ ಬಿಡುಗಡೆಯುಂಟು. ಕರ್ತನ ಆತ್ಮಸಾದಾತನ ಆತ್ಮವು ನನಗೆ ಇರುವುದರಿಂದಲೇ ನನಗೆ ಬಿಡುಗಡೆಯುಂಟು. 2ಕೊರಿ.3:17

133. ನನಗೆ ಪ್ರೀತಿಯುಂಟು. ಆದಕಾರಣ ನನಗೆ ಕೊಡಲ್ಪಟ್ಟ ಪರಿಶುದ್ಧಾತ್ಮನಿಂದ ದೇವರ ಪ್ರೀತಿಯು ನನ್ನ ಹೃದಯದೊಳಗೆ ತುಂಬಿಸಲ್ಪಟ್ಟಿದೆ. ರೋಮಾ.5:5

134. ನನಗೆ ಸಂತೋಷವುಂಟು. ನನ್ನ ಸಂತೋಷವನ್ನು ಯಾರೂ ನನ್ನಿಂದ ತೆಗೆದುಹಾಕಲು ಸಾಧ್ಯವಿಲ್ಲ. ಯೋಹಾ.16:23

135. ನನಗೆ ಪಾಪ ಕ್ಷಮೆಯುಂಟು. ದೇವರ ಕುಮಾರನಾಗಿರುವ ಯೇಸುವಿನ ರಕ್ತವು ಸಕಲ ಪಾಪವನ್ನು ನಿವಾರಣೆ ಮಾಡಿ ನನ್ನನ್ನು ಶುದ್ಧೀಕರಿಸುತ್ತದೆ. 1ಯೋಹಾ.1:7

136. ನನಗೆ ಸಮಾಧಾನವುಂಟು ಕರ್ತನಾಗಿರುವ ಯೇಸು ಕ್ರಿಸ್ತನ ಮೂಲಕವಾಗಿ ದೇವರಿಂದ ಸಮಾಧಾನವನ್ನು ಹೊಂದಿದ್ದೇನೆ. ರೋಮಾ.5:1

137. ನನ್ನ ಜೀವಿತದಲ್ಲಿ ಗುರಿಯುಂಟು. ಕ್ರಿಸ್ತನಲ್ಲಿ ವಿಶ್ವಾಸವಿಡುವುದರಿಂದ ಮಾತ್ರವಲ್ಲ ಆತನ ಮೂಲಕ ಬಾಧೆ ಪಡುವುದಕ್ಕೂ ನನಗೆ ಕೊಡಲ್ಪಟ್ಟಿದೆ. ಫಿಲಿ.4:19

138. ನನಗೆ ತೃಪ್ತಿಯುಂಟು. ನನ್ನ ದೇವರು ತನ್ನ ಐಶ್ವರ್ಯಕ್ಕೆ ತಕ್ಕ ಹಾಗೆ ನನ್ನ ಕೊರತೆಯನ್ನೆಲ್ಲಾ ಕ್ರಿಸ್ತೇಸುವಿನಲ್ಲಿ ತನ್ನ ಮಹಿಮೆಯ ಮೂಲಕ ನೆರವೇರಿಸುತ್ತಾನೆ. ಫಿಲಿ.4:19

139. ನನಗೆ ಒಂದು ಮುಂದಿನ ಕಾಲವುಂಟು. ನನ್ನ ದೇವರಾಗಿರುವ

ಕರ್ತನ ಮನೆಯಲ್ಲಿ ಅನೇಕ ವಾಸಸ್ಥಳಗಳುಂಟು. ನನ್ನ ರಕ್ಷಕನಾಗಿರುವ ಯೇಸು ಒಂದು ಸ್ಥಳವನ್ನು ನನಗಾಗಿ ಸಿದ್ಧ ಮಾಡಲು ಹೊರಟು ಹೋಗಿರುತ್ತಾನೆ. ಯೋಹಾ.14:2

140. ನನಗೆ ಸಂತೋಷವುಂಟು. ನಾನು ಹರ್ಷವುಳ್ಳವನಾಗಿರುವೆನು. ಕೀರ್ತ.37:14. ಆದ್ದರಿಂದ ನನ್ನ ಹೃದಯದ ಬಯಕೆಗಳನ್ನು ಕರ್ತನಿಂದ ಹೊಂದಿಕೊಳ್ಳುವೆನು.

141. ನನಗೆ ಬಲವುಂಟು. ನಾನು ಪರಿಶುದ್ಧಾತ್ಮನಿಂದ ಬಲಹೊಂದಿ ಕರ್ತನಿಗಾಗಿ ಸಾಕ್ಷಿಯುಳ್ಳವನಾಗಿರುವೆ. ಅಪೊ.1:8.

142. ನನ್ನಲ್ಲಿ ಪ್ರೀತಿಯುಂಟು. ಕ್ರಿಸ್ತೇಸುವಿನಲ್ಲಿ ಪ್ರೀತಿಯಿರುವುದರಿಂದ ಹಾಗೆಯೇ ನಾನು ಇತರರಲ್ಲಿ ಪ್ರೀತಿಯುಳ್ಳವನಾಗಿರುವೆನು. ಯೋಹಾ.13:34

143. ನನಗೆ ಜ್ಞಾನವುಂಟು, ವಿವೇಕವುಂಟು, ನನಗೆ ಕ್ರಿಸ್ತೇಸುವಿನ ಜ್ಞಾನವಿರುವುದರಿಂದ ಅದು ದೈವೀಕ ಜ್ಞಾನದ ಸಹಾಯದಿಂದ ಕರ್ತನಿಗಾಗಿ ಅಲ್ಪ ಸ್ವಲ್ಪ ಮಹತ್ವವುಳ್ಳ ಕಾರ್ಯ ನೆರವೇರಿಸುವೆನು. 1ಕೊರಿ.1:31

144. ನನಗೆ ದೃಢವಾದ ನಂಬಿಕೆಯುಂಟು. ನಾನು ದೃಢಗೊಂಡು ಕರ್ತನಿಗಾಗಿ ಮಹತ್ವವುಳ್ಳ ಕಾರ್ಯ ಮಾಡುವೆ. ದೇವದೂತರುಗಳು ನನ್ನನ್ನು ದೃಢಪಡಿಸುವರು. ಕರ್ತನು ನನ್ನನ್ನು ದೃಢಪಡಿಸುತ್ತಾನೆ. ದಾನಿ.11:32.

# 8. ಸಂಗೀತವು ನನ್ನ ವಿಶ್ವಾಸದ ಅರಿಕೆಯು

145. ಕರ್ತನು ನನ್ನ ಕುರುಬನಾಗಿರುವದರಿಂದ ನಾನು ಕೊರತೆ ಪಡುವುದಿಲ್ಲ. ಕಮ್ಮಿಯಾಗುವುದಿಲ್ಲ. ಓಲಾಡುವುದಿಲ್ಲ. ಕೀರ್ತ.23:1

146. ಆತನು ಹಸರುಗಾವಲುಗಳಲ್ಲಿ ನನ್ನನ್ನು ತಂಗಿಸುತ್ತಾನೆ. ವಿಶ್ರಾಂತಿಕರವಾದ ಹುಲ್ಲುಗಾವಲುಗಳಲ್ಲಿ ನನ್ನನ್ನು ತಂಗಿಸುತ್ತಾನೆ. ವಿಶ್ರಾಂತಿಕರವಾದ ನೀರುಗಳ ಬಳಿಗೆ ಬರಮಾಡುತ್ತಾನೆ. ಕೀರ್ತ.23:2

147. ಆತನು ನನ್ನ ಪ್ರಾಣವನ್ನು ಉಜ್ಜೀವಿಸಮಾಡಿ ತನ್ನ ಹೆಸರಿಗೆ ತಕ್ಕಂತೆ ನೀತಿ ಮಾರ್ಗದಲ್ಲಿ ನಡಿಡುತ್ತಾನೆ. ಕೀರ್ತ.23:3

148. ನಾನು ಕಾರ್ಗತ್ತಲಿನ ಕಣಿವೆಯಲ್ಲಿ ನಡೆಯುವಾಗಲೂ ನೀನು ಹತ್ತಿರವಿರುವುದರಿಂದ ಕೇಡಿಗೆ ಹೆದರೆನು. ಕರ್ತನು ಯಾವಾಗಲೂ ನನ್ನ ಬಳಿ ಇರುವನು. ಆತನ ದೊಣ್ಣೆಯೂ ಕೋಲೂ ನನಗೆ ಧೈರ್ಯ ಕೊಡುತ್ತದೆ. ಕೀರ್ತ.23:4

149. ನನ್ನ ಶತ್ರುಗಳ ಮುಂದೆಯೇ ನೀನು ನನಗೋಸ್ಕರ ಔತಣವನ್ನು ಸಿದ್ಧಪಡಿಸುತ್ತೀ. ಕೀರ್ತ.23:5

150. ಅಭಿಷೇಕವುಳ್ಳನಾದಾತನಾದ ದೇವರು ನನ್ನ ತಲೆಯನ್ನು ಎಣ್ಣೆಯಿಂದ ಅಭಿಷೇಕಿಸುತ್ತಾನೆ. ನನ್ನ ಪಾತ್ರೆ ತುಂಬಿ

ಹೊರಸೂಸುತ್ತದೆ. ಕೀರ್ತ.23:5

151. ನನ್ನ ಜೀವಮಾನದಲ್ಲೆಲ್ಲಾ ಶುಭವು ಕೃಪೆಯೂ ನನ್ನನ್ನು ಹಿಂಬಾಲಿಸುವವು. ಕೀರ್ತ.23:6

152. ನಾನು ಕರ್ತನ ಮಂದಿರದಲ್ಲಿ ನೆಲೆಸಿರುವೆನು. ಕೀರ್ತ.23:6

153. ದೇವರು ನನಗೆ ಆಶ್ರಯವೂ ದುರ್ಗವೂ, ಆಪತ್ತು ಕಾಲದಲ್ಲಿ ಅನುಕೂಲವಾದ ಸಹಾಯಕನು. ಕೀರ್ತ.46:1

154. ಆದುದರಿಂದ ಭೂಮಿಯು ಮಾರ್ಪಟ್ಟರೂ ಬೆಟ್ಟಗಳು ಸಮುದ್ರದಲ್ಲಿ ಮುಣುಗಿ ಹೋದರು ನನಗೇನೂ ಭಯವಿಲ್ಲ. ಕೀರ್ತ.46:2

155. ಸಮುದ್ರವು ಘೋಷಿಸುತ್ತಾ ನೊರೆಯನ್ನು ಕಾರಿದರೇನು? ಅದರ ಅಲ್ಲಕಲ್ಲೋಲಗಳಿಂದಲೂ ಪರ್ವತಗಳೂ ಕದಲಿದರೇನು? ನಾನು ಭಯಪಡುವುದಿಲ್ಲ. ಕೀರ್ತ.46:3

156. ಸೇನಾಧೀಶ್ವರನಾದ ದೇವರು ನಮಗೆ ಆಶ್ರಯ ದುರ್ಗ ವಾಗಿದ್ದಾನೆ. ಕೀರ್ತ.46:7

157. ಲೋಕದ ಸಮಸ್ತ ಜನಗಳಿಗೂ ಸರ್ವಾಧಿಪತಿಯು ನಾನೇ ಎಂದು ತಿಳಿದುಕೊಳ್ಳಿರಿ. ಭೂಮಿಯಲ್ಲಿರುವ ಆತನ ನಾಮವನ್ನು ಎತ್ತಿಯೇ ಘನ ಮಹಿಮೆ ಪಡಿಸುತ್ತೇನೆ. ಕೀರ್ತ.46:10

158. ನಾನು ಪರತ್ಪರನ ಮರೆಹೊಕ್ಕಿರುವವನು ಸರ್ವಶಕ್ತನ
ಆಶ್ರಯದಲ್ಲಿ ಸುರಕ್ಷಿತನಾಗಿರುವೆನು. ಕೀರ್ತ.91:1

159. ಕರ್ತನು ನನ್ನ ಆಶ್ರಯವು ನನ್ನ ಕೋಟೆಯೂ ನನ್ನ ದೇವರೂ
ನಾನು ನಂಬಿರುವಾತನೂ ಆಗಿದ್ದಾನೆ. ಕೀರ್ತ.91:2

160. ಆತನು ನನ್ನನ್ನು ಬೇಟೆಗಾರನ ಬಲೆಯಿಂದಲೂ ಮರಣಕರ
ವ್ಯಾಧಿಯಿಂದಲೂ ತಪ್ಪಿಸುವವನೂ,... ಕೀರ್ತ.91;3.

161. ಆತನು ನನ್ನನ್ನು ತನ್ನ ರೆಕ್ಕೆಗಳಿಂದ ಹೊದಗಿಸುವನು. ಆತನ
ಪಕ್ಕಗಳ ಮರೆಯನ್ನು ಆಶ್ರಯಿಸಿಕೊಳ್ಳುವಿ. ಆತನ ಸತ್ಯತೆಯೇ
ನನಗೆ ಖೇಡ್ಯವೂ ಗುರಾಣಿಯೂ ಆಗಿದೆ. ಕೀರ್ತ.91:4

162. ಇರುಳಿನಲ್ಲಿ ಭಯಹುಟ್ಟಿಸುವ ಯಾವುದಕ್ಕೂ, ಹಗಲಲ್ಲಿ
ಬರುವ ಬಾಣಕ್ಕೂ ನಾನು ಭಯಪಡುವುದಿಲ್ಲ. ಕೀರ್ತ.91:5

163. ಕತ್ತಲೆಯಲ್ಲಿ ಸಂಚರಿಸುವ ವಿಪತ್ತಿಗೂ ಹಾನಿಕರವಾದ
ಮಧ್ಯಾಹ್ನದ ಕೇಡಿಗೂ ಅಂಜುವ ಕಾರಣವಿಲ್ಲ. ಕೀರ್ತ.91:6

164. ನನ್ನ ಮಗ್ಗುಲಲ್ಲಿ ಸಾವಿರ ಜನರೂ, ನನ್ನ ಬಲಗಡೆಯಲ್ಲಿ
ಹತ್ತು ಸಾವಿರ ಜನರೂ ಸತ್ತು ಬಿದ್ದರೂ ನನಗೇನೂ ಕೇಡು
ತಟ್ಟದು. ಕೀರ್ತ.91:7

165. ನಾನು ಅದನ್ನು ಕಣ್ಣಾರೆ ಕಂಡು ದುಷ್ಟರಿಗೆ ಪ್ರತಿ ದಂಡನೆ
ಯುಂಟೆಂಬುದಕ್ಕೆ ಸಾಕ್ಷಿಯಾಗಿರುವೆನಷ್ಟೇ. ಕೀರ್ತ.91:8

166. ಕರ್ತನು ನನಗೆ ಆಶ್ರಯ ದುರ್ಗವಾಗಿದ್ದಾನೆ. ಪರಾತ್ಪರನನ್ನು ನಿವಾಸ ಸ್ಥಾನ ಮಾಡಿಕೊಂಡಿದ್ದಿಯಲ್ಲಾ. ಕೀರ್ತ.91:9

167. ಯಾವ ಕೇಡೂ ನನಗೆ ಸಂಭವಿಸದು. ಉಪದ್ರವಗಳು ನನ್ನ ಗುಡಾರದ ಸಮೀಪಕ್ಕೂ ಬಾರದು. ಕೀರ್ತ.91:10

168. ನನ್ನ ಮಾರ್ಗದಲ್ಲಿ ನನ್ನನ್ನು ಕಾಯುವುದಕ್ಕೆ ತನ್ನ ದೂತರಿಗೆ ಅಪ್ಪಣೆ ಕೊಡುತ್ತಾನೆ. ಕೀರ್ತ.91:11

169. ನನ್ನ ಕಾಲು ಕಲ್ಲಿಗೆ ತಗಲದಂತೆ ಅವರು ನನ್ನನ್ನು ಕೈಗಳಲ್ಲಿ ಎತ್ತಿಕೊಳ್ಳುವರು. ಕೀರ್ತ.91:12

170. ಸಿಂಹ ಸರ್ಪಗಳ ಮೆಲೆ ನಡೆಯುವಿ. ಪ್ರಾಯದ ಸಿಂಹವನ್ನು ಘಟಸರ್ಪವನ್ನೂ ತುಳಿದು ಬಿಡುವಿ. ಕೀರ್ತ.92:13

171. ನಾನು ಕರ್ತನ ಬಳಿ ಯಾವಾಗಲೂ ಆಸಕ್ತನಾಗಿರುವುದರಿಂದ ಅವನನ್ನು ರಕ್ಷಿಸುವನು. ಕೀರ್ತ.59:14

172. ನಾನು ಕರ್ತನ ನಾಮವನ್ನು ಅರಿತವನಾಗಿರುವುದರಿಂದ ಆತನು ನನ್ನನ್ನು ಉದ್ಧರಿಸುವನು. ಕೀರ್ತ.91:14

173. ನಾನು ಕರ್ತನನ್ನು ನೋಡಿ ಮೊರೆಯಿಡುವಾಗೆಲ್ಲಾ ಆತನು ಸದುತ್ತರವನ್ನು ದಯಪಾಲಿಸುವನು. ಕೀರ್ತ.91:15

174. ಅತನು ಇಕ್ಕಟ್ಟಿನ ಸಮಯದಲ್ಲಿ ಹತ್ತಿರವಿದ್ದು ಅವರನ್ನು ತಪ್ಪಿಸಿ ಘನಪಡಿಸುವನು. ಕೀರ್ತ.91:15

175. ಆತನು ದೀರ್ಘಾಯುಷ್ಯನ್ನು ಅನುಗ್ರಹಿಸಿ ಅವನನ್ನು ತೃಪ್ತಿ
ಪಡಿಸುವನು. ತನ್ನ ವಿಶೇಷವಾದ ರಕ್ಷಣೆಯನ್ನು ತೋರಿಸು
ವನು. ಕೀರ್ತ.91:16

176. ನನಗೆ ಸಹಾಯ ಬರುವ ಪರ್ವತಗಳ ಕಡೆಗೆ ಕಣ್ಣೆತ್ತಿ
ನೋಡುತ್ತೇನೆ. ಕೀರ್ತ.121:1

177. ಭೂವ್ಯೋಕಾಶಗಳನ್ನು ನಿರ್ಮಿಸಿದ ಕರ್ತನಿಂದಲೇ ನನ್ನ
ಸಹಾಯ ಬರುವುದು. ಕೀರ್ತ.121:2

178. ನನ್ನ ಪಾದಗಳನ್ನು ಕದಲಗೊಡಿಸದಿರಲಿ ನನ್ನನ್ನು
ಕಾಯುವಾತನು ತೂಕಡಿಸದಿರಲಿ. ಕೀರ್ತ.121:3

179. ನನ್ನನ್ನೂ ನನ್ನ ಕುಟುಂಬವನ್ನೂ ಕಾಯುವಾತನು
ತೂಕಡಿಸುವದಿಲ್ಲ, ನಿದ್ರಿಸುವದಿಲ್ಲ. ಕೀರ್ತ.121:4

180. ಕರ್ತನು ನನ್ನನ್ನು ಕಾಯುವನು. ಆತನು ನನ್ನ ಬಲಗಡೆಯಲ್ಲಿ
ನೆರಳಿನಂತಿರುವನು. ಕೀರ್ತ.121:5

181. ಹಗಲಲ್ಲಿ ಸೂರ್ಯನೂ ಇರುಳಿನಲ್ಲಿ ಚಂದ್ರನೂ ನಿನ್ನನ್ನು
ಬಾಧಿಸುವುದಿಲ್ಲ. ಕೀರ್ತ.121:6

182. ಕರ್ತನು ನನ್ನನ್ನು ಎಲ್ಲಾ ಕೇಡಿನಿಂದ ತಪ್ಪಿಸುವನು. ನನ್ನ
ಪ್ರಾಣವನ್ನು ಕಾಯುವನು. ಕೀರ್ತ.121:7

183. ಕರ್ತನು ನಾನು ಹೋಗುವಾಗಲೂ ಬರುವಾಗಲೂ ಇಂದಿನಿಂದ

ಸದಾಕಾಲವು ಕರ್ತನು ನನ್ನನ್ನು ಕಾಪಾಡುವನು.
ಕೀರ್ತ.121:8

## 9. ಧರ್ಮೋಪದೇಶಕಾಂಡದಲ್ಲಿನ ನನ್ನ ವಿಶ್ವಾಸದ ಅರಿಕೆಗಳು

184. ನನ್ನ ದೇವರಾದ ಕರ್ತನು ನನ್ನನ್ನು ಹೆಚ್ಚಿಸಿದ್ದರಿಂದ ನಾನು ಹೆಚ್ಚಿ ಆಕಾಶದ ನಕ್ಷತ್ರಗಳಷ್ಟಾಗಿದ್ದೀನಲ್ಲಾ. ಧರ್ಮೋ.1:10

185. ನಾನು ಈಗ ಇರುವುದಕ್ಕಿಂತಲೂ ಇನ್ನು ಸಾವಿರದಷ್ಟಾಗುವಂತೆ ನನ್ನ ಪಿತೃಗಳ ದೇವರಾದ ಕರ್ತನು ನನ್ನನ್ನು ಆಶೀರ್ವದಿಸಿದನು. ಧರ್ಮೋ.1:13

186. ಒಬ್ಬ ಮನುಷ್ಯನು ತನ್ನ ಮಗುವನ್ನು ಹೊತ್ತುಕೊಂಡಂತೆ ಕರ್ತನು ಇದುವರೆಗೂ ನನ್ನನ್ನು ಹೊತ್ತನಲ್ಲವೇ. ಕೊನೆವರೆಗೂ ಹೊತ್ತುಕೊಂಡು ನಡಿಸುತ್ತಾನೆ. ಧರ್ಮೋ.1:31

187. ನನ್ನ ದೇವರಾದ ಕರ್ತನು ತನ್ನ ಕೈಯಿಂದ ಆಶೀರ್ವದಿಸಿಕೊಂಡು ಬರುವನು. ಕರ್ತನು ನನ್ನೊಡನಿರುವುದರಿಂದ ನನಗೆ ಒಂದೂ ಕೊರತೆಯಾಗುವದಿಲ್ಲ. ಧರ್ಮೋ.2:7

188. ನಾನು ನನ್ನ ಶತ್ರುಗಳಿಗೆ ಭಯಪಡುವದಿಲ್ಲ. ಯಾಕೆಂದರೆ ನನ್ನ ದೇವರಾಗಿರುವ ಕರ್ತನು ತಾನೇ ನನಗಾಗಿ ಯುದ್ಧಮಾಡುವನು. ಧರ್ಮೋ.3:22

189. ನಮ್ಮ ಕರ್ತನಿಗೆ ಮೊರೆಯಿಡುವಾಗೆಲ್ಲಾ ಆತನು ನನಗೆ ಸಮೀಪವಾಗಿಯೇ ಇದ್ದಾನೆ. ಇಂಥ ದೇವರು ಹೀಗೆ ಸಮೀಪವಾಗಿ ಹೊಂದಿರುವೆವು. ಬೇರೆ ಎಷ್ಟು ದೊಡ್ಡ ಜನಾಂಗಕ್ಕಾದರು ಯಾವ ದೇವರು ಹೀಗೆ ಸಮೀಪಿಸುವನು? ಧರ್ಮೋ.4:7

190. ನಾನು ನನ್ನ ದೇವರಾಗಿರುವ ಕರ್ತನನ್ನು ಪೂರ್ಣ ಹೃದಯ ದಿಂದಲೂ ಪೂರ್ಣ ಪ್ರಾಣದಿಂದಲೂ ಪೂರ್ಣ ಶಕ್ತಿಯಿಂದಲೂ ಪ್ರೀತಿಸುತ್ತೇನೆ. ಧರ್ಮೋ.6:5

191. ನಾನು ಕೂಡಿಸದ ಉತ್ತಮ ವಸ್ತುಗಳಿಂದ ತುಂಬಿದ ಮನೆ ಗಳನ್ನೂ ನಾನು ಅಗಿಯುವ ನೀರು ಗುಂಡಿಗಳನ್ನು ನಾನು ಬೆಳಸದ ದ್ರಾಕ್ಷಿ ತೋಟಗಳನ್ನು ಎಣ್ಣೆಮರಗಳನ್ನು ಆತನು ನನಗೆ ದಯಪಾಲಿಸುತ್ತಾನೆ. ಧರ್ಮೋ.6:11

192. ನಾನು ನನ್ನ ದೇವರಾಗಿರುವ ಕರ್ತನಿಗೆ ಪರಿಶುದ್ಧ ಜನಾಂಗವು ಭೂಲೋಕದಲ್ಲಿರುವ ಸಮಸ್ತ ಜನಾಂಗಗಳಲ್ಲಿ ನನ್ನ ದೇವರಾ ಗಿರುವ ಕರ್ತನು ನನ್ನನ್ನು ತನಗೆ ಸ್ವಂತವಾಗಿರುವುದಕ್ಕಾಗಿ ಆದುಕೊಂಡನು. ಧರ್ಮೋ.7:6

193. ಕರ್ತನು ನನ್ನನ್ನು ನನ್ನ ಸಂತಾನವನ್ನು ವ್ಯವಸಾಯವನ್ನು ನನಗಿರುವ ಧಾನ್ಯ, ದ್ರಾಕ್ಷಾರಸ, ಎಣ್ಣೆ, ಇವುಗಳನ್ನೂ ನನ್ನ ದನ, ಕುರಿಗಳನ್ನೂ ಆಶೀರ್ವದಿಸುವನು. ಧರ್ಮೋ.7:13

194. ಸಕಲ ಜನಾಂಗಗಳಲ್ಲಿ ನಾನು ಆಶೀರ್ವದಿಸಲ್ಪಟ್ಟಿದ್ದೇನೆ. ನನ್ನ ಸಕಲ ಮೃಗ ಜೀವಿಗಳಿಗೂ ಹೆಣ್ಣುಗಳಾಗಲಿ ಗಂಡುಗಳಲ್ಲಾಗಲಿ ಬಂಜೆತನವಿರುವದಿಲ್ಲ. ಧರ್ಮೋ.7:11

195. ಕರ್ತನು ಸಕಲ ವ್ಯಾಧಿಗಳನ್ನು ನನ್ನಿಂದ ತೊಲಗಿಸುವನು. ಐಗುಪ್ತ ದೇಶದಲ್ಲಿ ಬಾಧಿಸಿದ ರೋಗಗಳೂ ಒಂದು ನನ್ನನ್ನು ಮುಟ್ಟಿಗೊಡದಂತೆ ನನ್ನನ್ನು ಕಾಯ್ದುಕೊಳ್ಳುವನು. ಧರ್ಮೋ.7:15

196. ಕರ್ತನು ನನಗೆ ಐಶ್ವರ್ಯ ಸಂಪಾದಿಸಲು ಬಲವನ್ನು ತಂದುಕೊಡುವಾತನಾಗಿದ್ದಾನೆ. ಧರ್ಮೋ.8:18

197. ನನ್ನ ದೇವರಾಗಿರುವ ಕರ್ತನು ನನ್ನ ಮುಂಭಾಗದಲ್ಲಿ ಹೊರಟು ಹೋಗುವನು. ಅತನು ದಹಿಸುವ ಅಗ್ನಿಯಂತೆ ಶತ್ರುಗಳನ್ನು ದಹಿಸಿ ಬಿಡುವನು. ಅವರನ್ನು ನನ್ನ ಮುಂಭಾಗದಲ್ಲಿ ಸೋತು ಹೋಗುವಂತೆ ಬೀಳ ಮಾಡುವನು. ಧರ್ಮೋ.9:3

198. ನಾನು ಸ್ವತಂತ್ರಿಸಿಕೊಳ್ಳಲು ಹೋಗುವ ದೇಶ ಬೆಟ್ಟಗಳು ಹಳ್ಳ ದಿಣ್ಣೆಗಳುಳ್ಳ ದೇಶ. ಅದು ಆಕಾಶದ ಮಳೆಯ ನೀರನ್ನು ಕುಡಿಯುವ ದೇಶ. ಧರ್ಮೋ.11:11

199. ಸಂವತ್ಸರದ ಪ್ರಾರಂಭ ಮೊದಲುಗೊಂಡು ಕೊನೆಯವರೆಗೂ ಯಾವಾಗಲೂ ನನ್ನ ದೇವರಾಗಿರುವ ಕರ್ತನ ಕಣ್ಣುಗಳು ನನ್ನ ಮೇಲೆಯೂ, ಕರ್ತನು ಕೊಡುವ ಸ್ವತಂತ್ರತೆಯ ಮೇಲೆಯೂ

ಇಟ್ಟಿರುವನು. ಧರ್ಮೋ.12:12

200. ಕರ್ತನು ನನ್ನನ್ನು ಆಶೀರ್ವದಿಸಿದ್ದರಿಂದ ಅನೇಕ ಜನಗಳಿ
ಸಾಲ ಕೊಡುವಿರೇ ಹೊರತು ಅವರಿಂದ ಸಾಲ ತೆಗೆದುಕೊಳ್ಳು
ವುದಿಲ್ಲ. ಅನೇಕ ಜನಾಂಗಗಳ ಮೇಲೆ ದೊರೆತನ ಮಾಡುವಿ
ಹೊರತು ಅವರು ನಿಮ್ಮ ಮೇಲೆ ದೊರೆತನ ಮಾಡುವದಿಲ್ಲ
ಧರ್ಮೋ.15:6

201. ಕರ್ತನು ಉಂಟು ಮಾಡದ ಬೇರೆ ಎಲ್ಲಾ ಜನಾಂಗಗ
ಗಿಂತಲೂ ನಮಗೆ ಹೆಚ್ಚಾದ ಕೀರ್ತಿ ಘನಮಾನಗಳನ್ನು ಕೊಟ
ಉನ್ನತ ಸ್ಥಿತಿಯಲ್ಲಿರಿಸುವನು. ಧರ್ಮೋ.26:19

202. ಕರ್ತನು ನಮ್ಮನ್ನು ಊರಲ್ಲಿಯೂ ಅಡವಿಯಲ್ಲಿಯ
ಆಶೀರ್ವದಿಸುವನು. ಧರ್ಮೋ.28:3

203. ಕರ್ತನು ನಮ್ಮ ಸಂತಾನವನ್ನು ವ್ಯವಸಾಯ, ದನಕುರಿಗಳನ
ಮುಂತಾದ ಪಶುಗಳನ್ನು ಆಶೀರ್ವದಿಸುವನ
ಧರ್ಮೋ.28:4.

204. ನಮ್ಮ ಪುಟ್ಟಿಗಳಿಗೂ ಕೋಣವಿಗಳಿಗೂ ಶುಭವುಂಟಾಗುವುದ
ಧರ್ಮೋ.28:5

205. ನಾವು ಕೆಲಸಕ್ಕೆ ಹೋಗುವಾಗಲೂ ಬರುವಾಗಲ
ಶುಭವುಂಟಾವವುದು. ಧರ್ಮೋ.28:6

206. ನಮಗೆ ವಿರೋಧವಾಗಿ ಏಳುವ ನಮ್ಮ ಶತ್ರುಗಳನ್ನು ಕರ್ತನು ನಮ್ಮ ಮುಂಭಾಗದಲ್ಲಿ ಸೋತು ಹೋಗುವಂತೆ ಮಾಡುವನು. ಧರ್ಮೋ.28:7

207. ಶತ್ರುಗಳು ಒಂದೇ ದಾರಿಯಿಂದ ನಮ್ಮ ಮೇಲೆ ಬಂದರು ಏಳು ದಾರಿಗಳಿಂದ ಓಡಿ ಹೋಗುವರು. ಧರ್ಮೋ.28:7

208. ನಾವು ನಮ್ಮ ದೇವರಾದ ಕರ್ತನ ಆಜ್ಞೆಗಳನ್ನು ಅನುಸರಿಸಿ ಆತನ ಮಾರ್ಗದಲ್ಲಿ ನಡೆಯುವಾಗ ಕರ್ತನು ತಾನು ಆಜ್ಞೆ ಮಾಡಿದ ಹಾಗೆಯೇ ನಮ್ಮನ್ನು ಪರಿಶುದ್ಧ ಜನಾಂಗವಾಗಿ ಸ್ಥಾಪಿಸುವನು. ಧರ್ಮೋ.28:9

209. ಭೂಮಿಯಲ್ಲಿರುವ ಎಲ್ಲಾ ಜನಗಳೂ ನಮ್ಮನ್ನು ಕರ್ತನ ಜನರೆಂದು ತಿಳಿದುಕೊಂಡು ನಮಗೆ ಭಯಪಡುವರು. ಧರ್ಮೋ.28:10

210. ಕರ್ತನು ನನ್ನ ಸಂತಾನ ಪಶುವ್ಯವಸಾಯಗಳ ಸಮೃದ್ಧಿಯನ್ನುಂಟು ಮಾಡುವನು. ಧರ್ಮೋ.28:11

211. ಕರ್ತನು ಆಕಾಶದಲ್ಲಿರುವ ತನ್ನ ಜನ ನಿಧಿಯನ್ನು ತೆರೆದು ನಮ್ಮ ದೇಶದ ಮೇಲೆ ಬೆಳೆಗೆ ಬೇಕಾದ ಹಾಗೆ ಮಳೆಯನ್ನು ಸುರಿಸಿ ನಮ್ಮ ಎಲ್ಲಾ ವ್ಯವಸಾಯವನ್ನು ಸಫಲ ಮಾಡುವನು. ಧರ್ಮೋ.28:12

212. ನಾನು ಧೈರ್ಯಗೊಂಡು ಒಂದೇ ಮನಸ್ಸಿನಿಂದಿರುತ್ತೇನೆ. ನ
ಶತ್ರುಗಳಿಗೆ ಅಂಜುವುದಿಲ್ಲ, ಕಳವಳಪಡುವದಿಲ್ಲ
ಧರ್ಮೋ.31:6

213. ನನ್ನ ಕರ್ತನಾಗಿರುವವನು ತಾನೇ ನಿನ್ನ ಮುಂದುಗ
ಹೋಗುವನು. ಆತನೇ ನಿನ್ನ ಸಂಗಡವಿರುವನು. ನಿನ್ನನ
ಅಪಜಯಕ್ಕೆ ಗುರಿಪಡಿಸುವುದಿಲ್ಲ. ಕೈಬಿಡುವದಿಲ್ಲ
ಅಂಜಬೇಡ ಧೈರ್ಯದಿಂದಿರು. ಧರ್ಮೋ.31:6,8

214. ಭೂಮಿಯ ಎತ್ತರವಾದ ಪ್ರದೇಶಗಳ ಮೇಲೆ ಹತ್ತಿಸಿ ಅವ
ವ್ಯವಸಾಯ ವೃದ್ಧಿಯನ್ನುಂಟು ಮಾಡಿ ಉಣ್ಣುವಂ
ಮಾಡಿದನು. ಧರ್ಮೋ.31:13

215. ಬಂಡೆಯ ಮೇಲೆ ಜೇನು ಗಿರಿಯಿಂದಲೂ ಎಣ್ಣೆಯ
ದೊರೆಯುವಂತೆ ಮಾಡಿ ಉಣ್ಣುವಂತೆ ಮಾಡಿದನ
ಧರ್ಮೋ.32:13

216. ನಾನು ಕರ್ತನಿಗೆ ಪ್ರಿಯನಾದವನೂ ಆತನೊಡನೆ ಸುಖವಾ
ತಂಗಿರುವೆ. ಆತನು ಯಾವಾಗಲೂ ಕಾಪಾಡಿ ನಿರ್ಭಯವಾ
ವಾಸಿಸುವಂತೆ ಮಾಡಿದನು. ಧರ್ಮೋ.33:12

217. ಕರ್ತನಿಂದ ನಾನು ಆಶೀರ್ವದಿಸಲ್ಪಟ್ಟವನು. ಮೇಲ
ಆಕಾಶದಿಂದುಂಟಾಗುವ ಮಂಜು ಕೆಳಗಣ ಸಾಗರ

ಸೆಲೆಗಳಿಂದಲೂ ಆತನು ನನ್ನನ್ನು ಆಶೀರ್ವದಿಸುವನು. ಧರ್ಮೋ.33:13

218. ಸೂರ್ಯನಿಂದ ಪರಿಪಕ್ವವುಂಟಾವಂತೆ ಮಾಡುವ ಫಲಗಳಿಂದಲೂ ಚಂದ್ರನಿಂದ ಪರಿಪಕ್ವವುಂಟಾಗುವ ಸುಂದರವಾದ ಫಲಗಳಿಂದಲೂ ನನ್ನನ್ನು ಆಶೀರ್ವದಿಸುವನು. ಧರ್ಮೋ.33:14

219. ಅನಾದಿಯದ ಪರ್ವತಗಳ ಉತ್ಪನ್ನ ಶಾಶ್ವತವಾದ ಬೆಟ್ಟಗಳಿಂದುಂಟಾಗುವ ಮೇಲು ಭೂಮಿಯಲ್ಲಿನ ಸಮೃದ್ಧಿಯಾದ ಬೆಳೆಯುವ ಫಲ ಇವೆಲ್ಲವುಗಳಲ್ಲಿ ಶ್ರೇಷ್ಟವಾದುದ್ದರಿಂದ ನನ್ನನ್ನು ಆಶೀರ್ವದಿಸುವನು. ಧರ್ಮೋ.33:15-16

220. ನನ್ನ ಅಲಂಕಾರವು ನನ್ನ ಕೋಡುಗಳು ಕಾಡುಕೋಣದ ಕೊಂಬುಗಳಂತಿರುವುದು. ಧರ್ಮೋ.33:17

221. ನಿಮ್ಮ ಕೋಟೆಯ ಬಾಗಿಲುಗಳಿಗೆ ಕಬ್ಬಿಣದ ಮತ್ತು ತಾಮ್ರದ ಅಗುಳಿಗಳಿರುವವು. ನೀವು ಇರುವವರೆಗೂ ನಿಮಗೆ ಸೌಖ್ಯವು ಇರುವದು. ಧರ್ಮೋ.33:26

222. ನಮಗೆ ಸಹಾಯಕವಾಗಿ ಆಕಾಶವನ್ನೇರಿ ಮೇಘಾರೂಢನಾಗಿ ಮಹಾಗಂಭೀರದಿಂದ ನಮ್ಮ ಸಹಾಯಕ್ಕೆ ಬರುವನು. ಧರ್ಮೋ.33:26

223. ಆದಿಯಿಂದಲೂ ನಮಗೆ ನಿವಾಸಸ್ಥಾನ. ಸದಾ ದೇವರ ಹಸ್ತವೇ
ನಮಗೆ ಆಧಾರ. ಧರ್ಮೋ.33:27

224. ಇಸ್ರಾಯೇಲ್ಯರಾದ ನಾವು ಎಷ್ಟೋ ಧನ್ಯರು. ನಮ್ಮಷ್ಟು
ಭಾಗ್ಯವಂತರು ಯಾರಿದ್ದಾರೆ? ಧರ್ಮೋ.33:29

225. ಕರ್ತನು ನಮ್ಮನ್ನು ಕಾಯುವ ಡಾಲೂ, ನಮ್ಮ ಗೌರವವನ್ನು
ಕಾಪಾಡುವ ಕತ್ತಿಯೂ ಆಗಿದ್ದಾನೆ. ಆದುದರಿಂದ ನಮ್ಮ
ಶತ್ರುಗಳು ನಮ್ಮ ಮುಂದೆ ಮುದುರಿಕೊಳ್ಳುತ್ತಾರೆ. ನಾವು
ಅವರಿಗಿದ್ದ ಎತ್ತರವಾದ ಸೀಮೆಯಲ್ಲಿ ಜಯಶಾಲಿಗಳಾಗಿ
ಸಂಚರಿಸುತ್ತೇವೆ. ಧರ್ಮೋ.33:29

## 10. ನಾನು ಯೇಸು ಕ್ರಿಸ್ತನ ರಕ್ತದ ಕೋಟೆಯೊಳಗೆ

226. ಗೋಲ್ಗೋಥಾಗುಡ್ಡದ ಮೇಲಿರುವ ಕಲ್ವಾರಿ ಶಿಲುಬೆಯ ಬಳಿ
ಬಂದು ನಿಂತಿರುವೆ.

227. ಯೇಸು ಕ್ರಿಸ್ತನ ರಕ್ತ ಹನಿಹನಿಯಾಗಿ ನಮ್ಮ ಮೇಲೆ ಬೀಳುತ್ತದೆ.

228. ಮುಳ್ಳು ಮುಡಿ ಸುತ್ತಲ್ಪಟ್ಟ ಕ್ರಿಸ್ತನ ಶಿರಸ್ಸಿನ ಮೇಲಿಂದ
ಬೀಳುತ್ತಿರುವ ರಕ್ತವು ನಮ್ಮ ಶಿರಸ್ಸಿನ ಮೇಲೆ
ಬೀಳುತ್ತಿರುವುದು. ನಮ್ಮ ಚಿಂತೆಗಳನ್ನು ಯೋಚನೆಗಳು
ತೊಳೆದು ಪರಿಶುದ್ಧ ಪಡಿಸುತ್ತದೆ.

229. ನನ್ನ ಮೇಲೆ ಪ್ರೀತಿಗೊಂಡು ಶಾಪವಾದ ಮುಳ್ಳು ಮುಡಿಯನ್ನು ಶಿರದಲ್ಲಿ ಧರಿಸಿಕೊಂಡು ಹೊತ್ತ ನನಗಾಗಿ ಶಿಲುಬೆಯ ಮೇಲೆ ಆತನು ಶಾಪಗ್ರಸ್ತನಾದಂತೆ - ಸಕಲ ಶಾಪಗಳಿಂದ ನಾನು ಬಿಡುಗಡೆ ಹೊಂದಿದ್ದೇನೆ. ಧರ್ಮೋ.23:5; ಗಲಾ.3:13

230. ನನ್ನ ಬಾಳಿನಲ್ಲಿ ಇನ್ನು ಬರುವ ಶಾಪಗ್ರಸ್ತರು ಇನ್ನು ಇರುವುದಿಲ್ಲ. ಪ್ರಕ.22:3

231. ಕ್ರಿಸ್ತನ ಕೈಗಳಿಂದ ಹೊರ ಬಂದ ರಕ್ತ ನನ್ನ ಕೈಗಳಲ್ಲಿ ಬೀಳುವದು.

232. ನಾನು ನನ್ನ ಕೈಗಳಲ್ಲಿ ಶುದ್ಧವುಳ್ಳವನೂ ಹೃದಯದಲ್ಲಿ ನಿರ್ಮಲ ಮನುಸ್ಸುಳ್ಳವನೂ ಆಗಿದ್ದು ನನ್ನ ಆತ್ಮವನ್ನು ಮಾಯಾ ಜಾಲಕ್ಕೆ ಒಪ್ಪಿಸಿ ಬಿಡದಿರುವವನು. ಕೀರ್ತ.24:4

233. ಕ್ರಿಸ್ತನಲ್ಲಿ ಹೊರ ಹೊಮ್ಮುವ ಪಾದಗಳಿಂದ ಸುರಿಯುವ ರಕ್ತವು ನನಗಾಗಿ ಶತ್ರುವಿನ ತಲೆಯನ್ನು ಜಜ್ಜುವುದು.

234. ಹೌದು! ದೇವರ ಕುರಿಮರಿಯ ರಕ್ತದಿಂದಲೂ ಸಾಕ್ಷಿಯ ವಚನದಿಂದಲೂ ನಾನು ಸೈತಾನನನ್ನು ಜೈಸಿರುವೆನು. ಪ್ರಕ.12:11

235. ಕೊರಡೆಗಳಿಂದ ಹೊಡೆಯಲ್ಪಟ್ಟು ಮುರಿಯಲ್ಪಟ್ಟು ಕ್ರಿಸ್ತನ ಶರೀರದಿಂದ ಸಂಪೂರ್ಣವಾಗಿ ಹರಿಯುವ ರಕ್ತವು ನನ್ನನ್ನು

ತೊಳೆದು ಶುದ್ಧೀಕರಿಸಿ ನೀತಿವಂತರಾಗಿ ಪರಿಶುದ್ಧರಾಗಿ ನೆಲೆಯಾಗಿ ಮಾಡುವುದು.

236. ಆದಾಮನ ಎಲುಬಿನಿಂದ ರೂಪಿತವಾದಂತೆ, ಕ್ರಿಸ್ತನ ಪಕ್ಕೆಯು ಸೀಳಲ್ಪಟ್ಟು ಆದ್ದರಿಂದ ಚಿಮ್ಮಿ ಬಂದ ರಕ್ತವು ಅದರ ಪುಣ್ಯದಿಂದ ಕ್ರಿಸ್ತನ ಮದುವಣಗಿತ್ತಿಯಾಗಿ ನಾನು ಸೃಷ್ಟಿಸಲ್ಪಟ್ಟಿದ್ದೇನೆ. ಅಪೊ.20:28

237. ಕಳಂಕ, ಸುಕ್ಕು ಮುಂತಾದದ್ದೊಂದೂ ಇಲ್ಲದ ಕನ್ನಿಕೆಯೋ ಎಂಬಂತೆ ಪರಿಶುದ್ಧನೂ ನಿರ್ದೋಷನೂ ಮಹಿಮೆಯುಳ್ಳದ್ದೂ ಆಗಿರುವ ಸಭೆಯಾಗಿ ತನ್ನೆದುರಿನಲ್ಲಿ ನಿಲ್ಲಿಸಿಕೊಳ್ಳಬೇಕೆಂದು ವಾಕ್ಯೋಪದೇಶ ಸಹಿತವಾದ ಜನ ಸ್ನಾನ ಮಾಡಿಸಿ ಶುದ್ಧೀ ಮಾಡಿದರು. ಎಫೆ.5:27

238. ನಾನು ಕ್ರಿಸ್ತನ ಅಂಗಗಳಾಗಿಯೂ ಆತನ ಶರೀರಕ್ಕೂ ಎಲುಬುಗಳಿಗೂ ನಾನು ಬಾಧ್ಯನಾಗಿದ್ದೇನೆ. ಎಫೆ.5:30

239. ಯೇಸು ಕ್ರಿಸ್ತನ ಕೂಡ ತನ್ನ ಸ್ವಂತ ರಕ್ತದಿಂದ ಪರಿಶುದ್ಧ ಪಡಿಸಿದ್ದಕ್ಕಾಗಿ ಪಟ್ಟಣದ ಹೊರಗೆ ಸತ್ತನು. ಇಬ್ರಿ.13:12

240. ಯೇಸು ಕ್ರಿಸ್ತನ ರಕ್ತವು ಸಕಲ ಪಾಪವನ್ನು ನೀಗಿಸಿ ನನ್ನನ್ನು ಶುದ್ಧೀಕರಿಸುವುದು. 1ಯೋಹಾ.1:7

241. ನಾನು ನನ್ನ ಪಾಪವನ್ನು ಅರಿಕೆ ಮಾಡುವಾಗೆಲ್ಲಾ ಕೃಪೆಯಾಗಿ

ನನ್ನ ಪಾಪವನ್ನು ಮನ್ನಿಸಿ ಎಲ್ಲಾ ಅನ್ಯಾಯವನ್ನು ನೀಗಿಸಿ ಶುದ್ಧೀಕರಿಸುವುದಕ್ಕೆ ಯೇಸುವು ನಂಬಿಗಸ್ತನೂ ನೀತಿವಂತನೂ ಆಗಿರುವನು. 1ಯೋಹಾ.1:9

242. ಯೇಸು ಕ್ರಿಸ್ತನ ರಕ್ತವು ನನಗಾಗಿ ಸುರಿಸಲ್ಪಟ್ಟ ಹೊಸ ಒಡಂಬಡಿಕೆಯ ರಕ್ತವಾಗಿರುವದು. ಮತ್ತಾ.26:28

243. ಯೇಸು ಕ್ರಿಸ್ತನು ನನಗಾಗಿ ಶಿಲುಬೆಯ ಮೇಲೆ ಸುರಿಸಲ್ಪಟ್ಟ ರಕ್ತದಿಂದ ತಾನು ಸಮಾಧಾನ ಪಡಿಸಿಕೊಳ್ಳಬೇಕೆಂತಲೂ ನಿಷ್ಕರ್ಶೆ ಮಾಡಿದನು. ಕೊಲೆ.1:2

244. ನನ್ನ ಪಾಪಗಳನ್ನು ಅರಿಕೆ ಮಾಡಿ ಬಿಟ್ಟು ಬಿಟ್ಟು ದೇವರ ಕರುಣೆಯನ್ನು ಹೊಂದಿಕೊಂಡೆನು. ಜ್ಞಾನೋ.28:13

245. ಕ್ರಿಸ್ತನನ್ನು ಅಂಗೀಕಾರ ಮಾಡಿಕೊಂಡ ನಾನು ನನ್ನ ಶರೀರದ ಅದರ ಆಶೆಯನ್ನು ಶಿಲುಬೆಯ ಮೇಲೆ ಜಡಿದಿದ್ದೇನೆ. ಗಲಾ.5:24.

246. ನಾನೋ ಕರ್ತನಾಗಿರುವ ಯೇಸು ಕ್ರಿಸ್ತನ ಶಿಲುಬೆಯೇ ಹೊರತು ಬೇರೊಂದು ಕುರಿತು ಹೆಚ್ಚಳ ಪಡುವುದು ಬೇಡವೇ ಬೇಡ. ಗಲಾ.6:14

247. ಲೋಕವು ನನಗಾಗಿ ಶಿಲುಬೆಗೆ ಹಾಕಿಸಿಕೊಂಡು ನನ್ನ ಪಾಲಿಗೆ ಸತ್ತಿತು. ನಾನು ಶಿಲುಬೆಗೆ ಹಾಕಿಸಿಕೊಂಡು ಲೋಕದ ಪಾಲಿಗೆ

ಸತ್ತೆನು. ಗಲಾ.6:14.

248. ಕ್ರಿಸ್ತನೊಡನೆ ನಾನೂ ಕೂಡ ಶಿಲುಬೆಯಲ್ಲಿ ಜಡಿಯಲ್ಪಟ್ಟೆನು. ಇನ್ನು ಜೀವಿಸುತ್ತಿರುವವನು ನಾನಲ್ಲ ಕ್ರಿಸ್ತನು ನನ್ನಲ್ಲಿ ಜೀವಿಸುತ್ತಿದ್ದಾನೆ. ಗಲಾ.2:20

249. ಈಗ ಶರೀರದಲ್ಲಿರುವ ನಾನು ಜೀವಿಸುವುದು ಹೇಗೆಂದರೆ ನನ್ನ ಮೇಲೆ ಪ್ರೀತಿ ಹೊಂದಿ ನನಗಾಗಿ ತನ್ನನ್ನು ತಾನೇ ಒಪ್ಪಿಸಿಕೊಟ್ಟು ದೇವರ ಕುಮಾರನ ಮೇಲಣ ನಂಬಿಕೆಯಲ್ಲಿಯೇ ಜೀವಿಸುತ್ತಿದ್ದೇನೆ. ಗಲಾ.2:20

250. ನನ್ನನ್ನು ಈ ಕೆಟ್ಟ ಪ್ರಪಂಚದೊಳಗಿಂದ ಬಿಡಿಸಬೇಕೆಂದು ಯೇಸು ಕ್ರಿಸ್ತನು ನಮ್ಮ ಪಾಪಗಳಿಗಾಗಿ ತನ್ನನ್ನು ಒಪ್ಪಿಸಿಕೊಟ್ಟನು. ಗಲಾ.1:4

251. ನನ್ನನ್ನು ತನ್ನ ಕೃಪೆಯಿಂದ ಕರೆದು ಕ್ರಿಸ್ತನನ್ನು ಬಿಟ್ಟು ಬಿಟ್ಟು ಒಂದು ದಿನವು ಲೋಕದ ಪ್ರಕಾರ ಸಂತೋಷದಿಂದಿರಲಾರೆ. ನಾನು ಪಾಪದಲ್ಲಿ ತಿರುಗಿ ಬೀಳುವುದೇ ಇಲ್ಲ. ಗಲಾ.1:6

252. ನಾನು ತಾಯಿಯ ಗರ್ಭದಲ್ಲಿದ್ದಾಗಲೇ ನನ್ನನ್ನು ಪ್ರತ್ಯೇಕಿಸಿ ತನ್ನ ಕೃಪೆಯಿಂದ ಕರೆದು ನನ್ನ ದೇವರು ಮುಂಭಾಗದಲ್ಲಿ ನಾನು ನಂಬಿಗಸ್ತನಾಗಿರುವೆನು. ಗಲಾ.1:15

253. ನಾನು ಕ್ರಿಸ್ತನವನಾಗಿದ್ದರೆ ಅಬ್ರಹಾಮನ ಸಂತತಿಯವನು.

ವಾಗ್ದಾನಕ್ಕನುಸಾರವಾಗಿ ಭಾಧ್ಯನೂ ಆಗಿದ್ದೇನೆ. ಗಲಾ.3:29

254. ಯೇಸು ಕ್ರಿಸ್ತನ ಕೃಪೆಯು ಐಶ್ವರ್ಯಕ್ಕೆ ತಕ್ಕ ಹಾಗೆ ಆತನ ರಕ್ತದಿಂದ ಪಾಪ ಪರಿಹಾರವಾಗಿ ನಮಗೆ ಬಿಡುಗಡೆಯಾಯಿತು. ಎಫೆ.1:7, ಕೊಲೊ.1:14

255. ಯೇಸು ಕ್ರಿಸ್ತನು ಸ್ವಂತ ರಕ್ತದಿಂದ ನಮ್ಮನ್ನು ಬಾಧ್ಯರನ್ನಾಗಿ ಮಾಡಿಕೊಂಡನು. ಆದುದರಿಂದಲೇ ನಾವು ಆತನವರು. ಅಪೊ.20:28

256. ನಾನು ಕ್ರಿಸ್ತನ ರಕ್ತದಿಂದ ನೀತಿವಂತನಾಗಿರಲಾಗಿ ಆತನ ಮೂಲಕ ಬರುವ ಕೋಪಕ್ಕೆ ತಪ್ಪಿಸಿಕೊಳ್ಳುವುದು ಮತ್ತೂ ನಿಶ್ಚಯವಲ್ಲವೇ. ರೋಮಾ.5:9

257. ನನ್ನನ್ನು ಆಶೀರ್ವದಿಸುವ ಆಶೀರ್ವಾದದ ಪಾತ್ರೆಯು ಕ್ರಿಸ್ತನ ರಕ್ತದಲ್ಲಿ ಪಾಲುದಾರರಾಗಿದ್ದೇವೆಂಬುದನ್ನು ಸೂಚಿಸುತ್ತದೆ. 2 ಕೊರಿ.10:16

258. ಈಗಾಗಲೇ ಮೊದಲು ದೂರವಾಗಿದ್ದ ನೀವು ಕ್ರಿಸ್ತ ಯೇಸುವನ್ನು ಸೇರಿದವರಾಗಿದ್ದು ಆತನ ರಕ್ತದ ಮೂಲಕ ಸಮೀಪಸ್ಥ ರಾಗಿದ್ದೀರಿ. ಎಫೆ.2:13.

259. ಯೇಸು ಕ್ರಿಸ್ತನ ಶಿಲುಬೆಯ ಮೇಲೆ ಸುರಿಸಿದ ರಕ್ತದಿಂದ ತಾನು ಸಮಾಧಾನವನ್ನು ಉಂಟು ಮಾಡಿದನು. ಕೊಲೊ.1:20

260. ಭೂಪರಗಳಲ್ಲಿರುವ ಸಮಸ್ತವನ್ನೂ ಆತನ ಮೂಲಕ ತನಗೆ ಸಂಧಾನಪಡಿಸಿಕೊಳ್ಳಬೇಕೆಂದು ನಿಷ್ಕರ್ಷೆ ಮಾಡಿದನು. ಕೊಲೊ.1:20

261. ಯೇಸು ಕ್ರಿಸ್ತನ ಮರಣಾಧಿಕಾರಿಯಾದ ಸೈತಾನನನ್ನು ಅಡಗಿಸಿ ಬಿಡುವದಕ್ಕೂ ಮರಣ ಭಯದ ದೆಸೆಯಿಂದ... ಇಬ್ರಿ.2:14

262. ಕ್ರಿಸ್ತನ ರಕ್ತವು ನನ್ನನ್ನು ತೊಳೆದು ಶುದ್ಧೀಕರಿಸುವುದರಿಂದ ದುಷ್ಟ ಮನಃಸಾಕ್ಷಿ ನನ್ನನ್ನು ಬಾಧಿಸದಂತೆ ನೋಡಿಕೊಳ್ಳುವೆ.

263. ಕ್ರಿಸ್ತನ ರಕ್ತವು ಜೀವವುಳ್ಳ ದೇವರಿಗೆ ಸೇವೆ ಮಾಡುವುದಕ್ಕೆ ನನ್ನ ಮನಸ್ಸಾಕ್ಷಿಯನ್ನು ಶುದ್ಧೀಕರಿಸಲ್ಪಡುವುದು. ರಕ್ತಧಾರೆ ಯಿಲ್ಲದೆ ಪಾಪ ಪರಿಹಾರವಿಲ್ಲ ಎಂದು ಸತ್ಯವೇದ ಹೇಳುತ್ತದೆ. ಇಬ್ರಿ.9:22

264. ನನಗಾಗಿ ಚೆಲ್ಲಲ್ಪಟ್ಟ ಯೇಸು ಕ್ರಿಸ್ತನ ರಕ್ತವು ನನಗೆ ಪಾಪ ಪರಿಹಾರವನ್ನೂ ರಕ್ಷಣಾ ಅನುಭವವನ್ನೂ ತಂದಿತು. ಇಬ್ರಿ.9:22

265. ನಾನು ಪರಿಶುದ್ಧ ಸ್ಥಳಕ್ಕೆ ಪ್ರವೇಶಿಸುವದಕ್ಕೆ ಯೇಸು ಕ್ರಿಸ್ತನು ತಾನೇ ತನ್ನ ದೇಹಕ್ಕೆ ಮಾತ್ರ ಸಂಬಂಧಪಟ್ಟ ನಿಯಮ ಗಳಾಗಿದ್ದು ತಿದ್ದು ಪಾಟಿನ ಕಾಲದವರೆಗೆ ಮಾತ್ರ ನೇಮಕ ವಾದವು. ಇಬ್ರಿ.9:10

266. ಆತನ ರಕ್ತದಿಂದ ಧೈರ್ಯವುಂಟಾಗಿದೆ. ಆ ಮಾರ್ಗವಾಗಿ ಪ್ರವೇಶಿಸುವುದಕ್ಕೆ. ಇಬ್ರಿ.10:20

267. ಚೀಯೋನ್ ಪರ್ವತಕ್ಕೂ, ಪರಲೋಕದ ಯೆರೂಸಲೇಮಿಗೂ ಉತ್ಸವ ಸಂಘದಲ್ಲಿ ಕೂಡಿರುವ ಕೋಟ್ಯಾನುಕೋಟಿ ದೇವದೂತರ ಬಳಿಗೂ ಕೂಡಿಕೊಂಡು ಸೇರಿರುವೆ. ಇಬ್ರಿ.12:22

268. ಸಾವಿರ ಹತ್ತು ಸಾವಿರ ದೇವದೂತರ ಬಳಿಯಲ್ಲಿ ಪರಲೋಕ ದಲ್ಲಿ ಹೆಸರು ಬರೆಸಿಕೊಂಡಿರುವ ಚೊಚ್ಚಲ ಮಕ್ಕಳ ಸಭೆಗೂ ಎಲ್ಲರಿಗೆ ನ್ಯಾಯಾಧಿಪತಿಯಾಗಿರುವ ದೇವರ ಬಳಿಗೂ ಬಂದಿರುವೆನು. ಇಬ್ರಿ.17:22

269. ಎಲ್ಲರಿಗೂ ನ್ಯಾಯಾಧಿಪತಿಯಗಿರುವ ದೇವರ ಬಳಿಗೂ ಸಿದ್ಧಿಗೆ ಬಂದಿರುವ ನೀತಿವಂತರ ಆತ್ಮಗಳ ಬಳಿಗೂ ಬಂದು ಸೇರಿದ್ದೇವೆ. ಇಬ್ರಿ.12:23

270. ಹೊಸ ಒಡಂಬಡಿಕೆಗೆ ಮಧ್ಯಸ್ಥನಾಗಿರುವ ಯೇಸುವಿನ ಬಳಿಗೆ ಹೆಬೇಲನ ರಕ್ತಕ್ಕಿಂತ ಹಿತಕರವಾಗಿ ಮಾತಾಡುವ ಪ್ರೋಕ್ಷಣಾ ರಕ್ತದ ಬಳಿಗೂ ಸೇರಿದ್ದೇನೆ. ಇಬ್ರಿ.12:24

271. ಕರ್ತನು ನನ್ನನ್ನು ನಿಷ್ಕಳಂಕವಾದ ದೇವರ ಕುರಿಯಾಗಿರುವ ಕ್ರಿಸ್ತನ ಅಮೂಲ್ಯರನ್ನಾಗಿ ಮಾಡಿದನು. 1 ಪೇತ್ರ 1:19

272. ಕರ್ತನು ನನ್ನೊಡನೆ ಪ್ರೀತಿ ತೋರಿಸಿ ತನ್ನ ರಕ್ತದ ಮೂಲ
ನನ್ನನ್ನು ಶುದ್ಧಿಕರಿಸಿ ತಂದೆಯಾಗಿರುವ ದೇವರ ಮುಂ
ನನ್ನನ್ನು ರಾಜನನ್ನಾಗಿಯೂ ಯಾಜಕನನ್ನಾಗಿಯ
ಮಾಡಿರುವನು. ಪ್ರಕ.1:6

273. ಕ್ರಿಸ್ತನು ನನಗಾಗಿ ಯಜ್ಞಾರ್ಪಿತನಾಗಿ ತನ್ನ ರಕ್ತದಿಂ
ಮನುಷ್ಯರನ್ನು ದೇವರಿಗಾಗಿ ಆದುಕೊಂಡನು. ಪ್ರಕ.5:9

274. ನಾನು ನನ್ನ ನಿಲುವಂಗಿಯನ್ನು ಯಜ್ಞದ ಕುರಿಯಾದಾತ
ರಕ್ತದಲ್ಲಿ ಶುಭ್ರ ಮಾಡಿಕೊಂಡಿದ್ದೇನೆ. ಪ್ರಕ.7:14

275. ನಾನು ದೇವರ ಸಿಂಹಾಸನದ ಮುಂದೆ ಇದ್ದುಕೊಂಡು ಆತ
ಆಲಯದಲ್ಲಿ ಹಗಲಿರುಳು ಆತನನ್ನೇ ಸೇವಿಸುವೆನು
ಪ್ರಕ.7:15

## 11. ಪರಿಶುದ್ಧತೆಯಲ್ಲಿರ ಬೇಕಾದ ವಿಶ್ವಾಸ ಅರಿಕೆಗಳು

276. ನನ್ನ ದೇವರು ಪರಿಶುದ್ಧನು. ಪರಿಶುದ್ಧತ್ವದಲ್ಲಿ ಮಹ
ವುಳ್ಳವನು. ವಿಮೊ.15:11

277. ಕರ್ತನು ನನ್ನನ್ನು ಪರಿಶುದ್ಧ ಮಾಡುವಾತನು. ಆತನ
ಯೆಹೋವ ಮಕ್ಕದೇಶ್ ಎಂಬಾತನು. ಯಾಜ.20:8

278. ನನ್ನ ದೇವರಾಗಿರುವ ಕರ್ತನು ಪರಿಶುದ್ಧವಾಗಿರುವಂತೆ ನಾನೂ ಪರಿಶುದ್ಧನಾಗಿರುವೆನು. ಯಾಜ.20:26

279. ಸೇನಾಧೀಶ್ವರನಾದ ಕರ್ತನು ಪರಿಶುದ್ಧನು, ಪರಿಶುದ್ಧನು, ಭೂಮಂಡಲದಲ್ಲೆಲ್ಲಾ ಆತನ ಮಹಿಮೆ ತುಂಬಿರುತ್ತದೆ ಯೆಶಾ.6:3

280 ದೇವರಾದ ಕರ್ತನು ಪರಿಶುದ್ದನು ಪರಿಶುದ್ಧನು ಪರಿಶುದ್ಧನು. ಆತನು ಸರ್ವಶಕ್ತನು. ವರ್ತಮಾನ ಭೂತ ಭವಿಷ್ಯತ್ ಕಾಲಗಳಲ್ಲಿರುವಾತನೂ ಆಗಿದ್ದಾನೆ. ಪ್ರಕ.4:8

281. ತಂದೆಯಾಗಿರುವ ಕರ್ತನು ಪರಿಶುದ್ಧನು. ಕುಮಾರನಾಗಿರುವ ಕರ್ತನು ಪರಿಶುದ್ಧನು. ಪರಿಶುದ್ಧಾತ್ಮನಾಗಿರುವ ದೇವರು ಪರಿಶುದ್ದನು.

282. ಪರಲೋಕದಲ್ಲಿ ಸಾಕ್ಷಿ ಕೊಡುವ ಮೂವರು. ತಂದೆ, ಮಗ, ಪರಿಶುದ್ಧಾತ್ಮ- ಈ ಆತ್ಮ, ನೀರು, ರಕ್ತ ಎಂಬ ಮೂರು ಸಾಕ್ಷಿಗಳುಂಟು. ಈ ಮೂರು ಒಂದೇ ಅಭಿಪ್ರಾಯವಾದ ಸಾಕ್ಷಿಗಳು. 1 ಯೋಹಾ.5:7

283. ಕರ್ತನು ತನ್ನ ಶರೀರವನ್ನು ಪರಿಶುದ್ಧ ಪಡಿಸುವಾತನು. ಪ್ರಾಣ, ಆತ್ಮ ಶರೀರವನ್ನು ಪರಿಶುದ್ಧ ಪಡಿಸುವಾತನು. ಯಾಜ.20:8

284. ಸಮಾಧಾನದ ದೇವರಾಗಿರುವಾತನು ತಾನೇ ಪರಿಪೂರ್ಣವಾಗಿ ಪವಿತ್ರ ಮಾಡುವಾತನು. 1ಥೆಸ.5:23

285. ನನ್ನ ಶರೀರ ಆತ್ಮ ಪ್ರಾಣ ಸಂಪೂರ್ಣವಾಗಿ ಕರ್ತನಾದ ಯೇ
ಕ್ರಿಸ್ತನು ಪ್ರತ್ಯಕ್ಷನಾಗುವಾಗ ದೋಷವಿಲ್ಲದೆ ಇರುವ
ಕಾಪಾಡಲ್ಪಡುತ್ತದೆ. 1 ಥೆಸ.5:23

287. ಕರ್ತನು ತನ್ನ ಮಹಿಮೆಯುಳ್ಳ ಸನ್ನಿಧಾನದಲ್ಲಿ ನಿರ್ದೋ
ಗಳಾಗಿ ಹರ್ಷದೊಡನೆ ನಿಲ್ಲಿಸುವದಕ್ಕೂ ಶಕ್ತನಾಗಿರುವ
ಯೂದ 24.

288. ನನ್ನ ದೇವರಾಗಿರುವ ಕರ್ತನಿಗೆ ಸಮಾನನು ಯಾರು? ಆತ
ಪರಿಶುದ್ಧತ್ವದಿಂದ ಸರ್ವೋತ್ತಮನು ಆಗಿರುವನ
ವಿಮೋ.15:11

289. ನಾನು ಪರಿಶುದ್ಧನಾಗಿರಬೇಕೆಂದು ನನ್ನ ಕುರಿತು ದೇವ
ಚಿತ್ತವಾಗಿದೆ. 1ಥೆಸ.4;3.

290. ಕರ್ತನು ನನ್ನನ್ನು ಅಶುದ್ಧದಲ್ಲಿಂದ ಪರಿಶುದ್ಧತ್ವ
ಕರೆದಿರುವನು. 1 ಥೆಸ.4:7

291. ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನನ್ನು ತಿಳಿ
ಕೊಳ್ಳುವುದರಿಂದ ಪ್ರಪಂಚದ ಶುದ್ಧತೆಗಳಿಂ
ತಪ್ಪಿಸಿಕೊಂಡಿದ್ದೇನೆ. 2 ಪೇತ್ರ 2:20

292. ಕರ್ತನು ನನ್ನನ್ನು ದೇವ ಸ್ವರೂಪದಲ್ಲಿ ದೇವರೂಪದ
ಪರಿಶುದ್ಧನನ್ನಾಗಿ ಸೃಷ್ಟಿ ಮಾಡಿದ್ದಾನೆ. ಆದಿ.1:26

293. ನಾವು ಕರ್ತನಿಗೆ ಮೀಸಲಾದ ಜನಾಂಗವಾಗಿದ್ದರಲ್ಲವೆ ಆತನು ಭೂಲೋಕದಲ್ಲಿರುವ ಸಮಸ್ತ ಜನಾಂಗಗಳಲ್ಲಿ ನಿಮ್ಮನ್ನೇ ಸ್ವಕೀಯ ಜನರಾಗುವುದಕ್ಕೆ ಆದುಕೊಂಡನು. ಧರ್ಮೋ.7:6

294. ನಾನು ಪರಿಶುದ್ಧ ಜಾತಿ ನಾನು ಕರ್ತನಿಂದ ದೇವರಾದುಕೊಂಡ ಜನಾಂಗವೂ ಮೀಸಲಾದ ಜನವೂ ದೇವರ ಸ್ವಕೀಯ ಪ್ರಜೆಯೂ ಆಗಿದ್ದೇನೆ. 1 ಪೇತ್ರ 2:9.

295. ನಾನು ರಾಜವಂಶಸ್ಥರದ ಯಾಜಕರೂ ಮೀಸಲಾದ ಜನವು ದೇವರ ಸ್ವಕೀಯ ಪ್ರಜೆಯೂ ಆಗಿದ್ದೇನೆ. 1ಪೇತ್ರ 1:9

296. ನಾನು ಪರಿಶುದ್ಧ ನಿವಾಸಸ್ಥಾನ ಉನ್ನತವಾದ ದೇವರು ವಾಸವಗಿರುವ ಪರಿಶುದ್ಧ ಸ್ಥಳವಾಗಿ ತನ್ನ ಶರೀರವನ್ನು ಒಪ್ಪಿಸಿಕೊಟ್ಟಿದ್ದೇನೆ. ಕೀರ್ತ.46:4

297. ನಾನು ಪರಿಶುದ್ಧ ನಗರವೂ ಹೊಸ ಯೆರೂಸಲೇಮು ಆಗಿರುವ ಪರಿಶುದ್ಧ ನಗರದಂತೆ ಕರ್ತನು ನನ್ನನ್ನು ತಿಳಿದುಕೊಂಡಿರುವನು.

298. ಮನುಷ್ಯನ ಮಧ್ಯದಲ್ಲಿ ವಾಸ ಮಾಡುವ ದೇವರಾಗಿರುವ ಕರ್ತನು ನನ್ನಲ್ಲಿ ವಾಸವಾಗಿರುವನು. ಪ್ರಕ.21:2

299. ನಾನು ಪರಿಶುದ್ಧ ಆಲಯವೂ ದೇಫರ ಪರಿಶುದ್ಧವೂ ನಿತ್ಯ ನಿವಾಸವಾಗಿ ಆತನ ಆಲಯದಲ್ಲಿ ಭೂಷಣವಾಗಿರುವುದು. ಕೀರ್ತ.93:5

300. ಪರಿಶುದ್ಧವೆಂಬ ಭೂಷಣದೊಡನೆ ಕರ್ತನಿಗೆ ನಮಸ್ಕರಿಸಿ
ಕೀರ್ತ.96:9

301. ನಾನು ಕರ್ತನಿಗೆ ಮುಂಭಾಗದಲ್ಲಿ ಪರಿಶುದ್ಧ ಪರ್ವತವ
ಇರುತ್ತೇನೆ. ಕೀರ್ತ.43:3

302. ಕರ್ತನು ನನ್ನನ್ನು ನಡಿಸಿ ತನ್ನ ಪರಿಶುದ್ಧ ಪರ್ವತಕ್ಕೂ ತನ
ನಿವಾಸ ಸ್ಥಳಗಳಿಗೂ ನನ್ನನ್ನು ತೆಗೆದುಕೊಂಡು ಹೋದನ
ಕೀರ್ತ.43:3.

303. ನನ್ನ ಶರೀರದಲ್ಲಿ ನನ್ನ ಎಲ್ಲಾ ಅಶುದ್ಧತೆಗಳನ್ನು ಪರಿಹರಿ
ನನ್ನನ್ನು ಶುದ್ಧೀಕರಿಸುವನು. 2 ಕೊರಿ.7:1

304. ದೇವರ ಭಯದಿಂದ ಕೂಡಿದವರಾಗಿ ಪವಿತ್ರತ್ವವನ್ನು ಸಿದ್ಧಿ
ತರುವನು. 2 ಕೊರಿ.7:1

305. ನಾನು ದೇವರಿಗೆ ಭಯಭಕ್ತಿಯುಳ್ಳವನಾಗಿರುವೆ. ಪಾ
ದ್ವೇಷಗಳನ್ನು ಬಿಟ್ಟು ದೂರವಿರುವೆನು. ಜ್ಞಾನೋ.8:13

306. ನಾನು ಧರ್ಮಶಸ್ತ್ರಕ್ಕೆ ಆಧೀನನಲ್ಲ; ಕೃಪೆಗೆ ಆಧೀನನಾಗಿ
ವುದರಿಂದ ಪಾಪವು ನನ್ನನ್ನು ಜೈಸಿಸದು. ರೋಮಾ.6:14

307. ನಾನು ನನ್ನನ್ನು ಪಾಪದ ಪಾಲಿಗೆ ಸತ್ತವರು ದೇವರ
ಜೀವಿಸುವವರೂ ಎಂದೆನಿಸಿಕೊಳ್ಳಬಾರದು. ರೋಮಾ.6:

308. ಸಾಯತಕ್ಕ ನಿಮ್ಮ ದೇಹದ ಮೇಲೆ ಪಾಪವನ್ನು ಆಳಗೊಡಿಸ

ನೀವು ದೇಹದ ದುರಾಶೆಗಳಿಗೆ ಒಳಪಡಬೇಡಿರಿ. ರೋಮಾ.6:12

309 ನೀವು ನಿಮ್ಮ ಅಂಗಗಳನ್ನು ನೀತಿಯುಳ್ಳ ಆಯುಧಗಳಾಗಿ ಒಪ್ಪಿಸಿ ಕೊಡಿರಿ. ರೋಮಾ.6:13

310 ಪಾಪಗಳಿಂದ ನಾನು ಸಂಪೂರ್ಣವಾಗಿ ಬಿಡುಗಡೆ ಹೊಂದು ನೀತಿಗೆ ದಾಸನಾಗಿರುವೆನು. ರೋಮಾ.6:18

311 ಈಗಿನಿಂದ ಪರಿಶುದ್ಧರಾಗಿ ನಡೆದುಕೊಳ್ಳುವಂತೆ ನನ್ನ ಅಂಗಗಳನ್ನು ನೀತಿಗೆ ಒಪ್ಪಿಸಿಕೊಟ್ಟಿದ್ದೇನೆ. ರೋಮಾ.6:19

312. ಆದುದರಿಂದ ಪರಿಶುದ್ಧರಾಗಿರುವುದಕ್ಕೆ ನನಗೆ ದೊರೆತ ಬಲವು ಅಂತ್ಯವು ನಿತ್ಯ ಜೀವವೂ ಆಗಿದೆ. ಪಾಪವು ಕೊಡುವ ಸಂಬಳ ಮರಣ. ದೇವರ ಉಚಿತಾರ್ಥ ವರವು ನಿತ್ಯ ಜೀವವು. ರೋಮಾ.6:22

313. ನಿಮ್ಮ ತಂದೆಯು ಯಾವ ದೋಷವೂ ಇಲ್ಲದವನಾಗಿರುವುದರಿಂದ ನೀವೂ ದೋಷವಿಲ್ಲದವರಾಗಿರ್ರಿ. ಮತ್ತಾ.5:48

314. ಯಾವ ತರಹದ ಭೋಜನ ಪದಾರ್ಥಗಳನ್ನು ತಿಂದು ಲೋಕದವರು ಕುಡಿಯುವ ದ್ರಾಕ್ಷಾರಸವನ್ನು ಕುಡಿದು ತನ್ನನ್ನು ಅಶುದ್ಧ ಮಾಡಿಕೊಳ್ಳುವದಿಲ್ಲ. ದಾನಿ.1:8

